# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು

ಎಚ್ಚೆಸ್ಕೆ

ಅಕ್ಟೋಬರ್ ೧೯೮೨

೭

ಸಮನ್ವಯ ಸಮಿತಿ (ರಿ.)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಬ್ಯಾಂಕಿಂಗ್ ಪ್ರಪಂಚ

ಹಣ ಬ್ಯಾಂಕಿಂಗ್ ವಿಚಾರಗಳಿಗೆ
ಮೀಸಲಾದ ಅರ್ಧವಾರ್ಷಿಕ

ಸಂಪುಟ ೩ ಸಂಚಿಕೆ ೨
ಅಕ್ಟೋಬರ್ ೧೯೮೨



ಶೀರ್ಷಿಕೆ ವಿನ್ಯಾಸ—ಗಿರಿಧರ ಖಾಸನೀಸ

**ಸಮನ್ವಯ ಸಮಿತಿ (ರಿ.)**
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

ವಾರ್ಷಿಕ ಚಂದಾ ರೂ. ೫
ಆಜೀವ ಚಂದಾ ರೂ. ೧೦೦

# ಬ್ಯಾಂಕಿಂಗ್ ಪ್ರಪಂಚ

## ಪರಿವಿಡಿ





ಬ್ಯಾಂಕಿಂಗ್ ಪ್ರಪಂಚಕ್ಕೆ ಸಾರ್ವಜನಿಕರಿಂದ ಲೇಖನಗಳನ್ನು ಸ್ವೀಕರಿಸಲಾಗುತ್ತದೆ. ಲೇಖನಗಳು ಸಂಕ್ಷೇಪವಾಗಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆದಿರಬೇಕು ಅಥವಾ ಬೆರಳಚ್ಚಾಗಿರಬೇಕು.

# ಬ್ಯಾಂಕಿಂಗ್ ಪ್ರಪಂಚ

---

**ಈ ಸಂಚಿಕೆಯ ಲೇಖನದಾರರು**

**ಎಂ. ಬಿ. ಪಾಟೀಲ್,** ಬೆಂಗಳೂರಿನ ಸಹಕಾರ ಶಿಕ್ಷಣ ಕಾಲೇಜಿನ ಪ್ರಾಚಾರ್ಯ

**ಜಿ. ಎನ್. ನರಸಿಂಹಮೂರ್ತಿ,** ಮುಖ್ಯ ಕೋಶಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಹೊಸಪೇಟೆ–583 201

**ಕ. ನ. ಜಯರಾಮು,** ಖಜಾಂಚಿ, ಸಮನ್ವಯ ಸಮಿತಿ

**ಮಧುಕರ್ ವಿ. ನವರತ್ನ,** ಉದ್ಯೋಗಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು-560 002

**ಅ. ಚ. ಅಶೋಕ ಕುಮಾರ,** ವ್ಯವಸ್ಥಾಪಕ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಿವಸಮುದ್ರ–571 437

**ಸಾ. ಅ. ಮಂಜುನಾಥ,** 45–5/1, 'ಶಂಕರ ಕೃಪೆ' ಹಿಂಭಾಗ, 16ನೆಯ ಅಡ್ಡರಸ್ತೆ, 3ನೆಯ ವಿಭಾಗ, ಜಯನಗರ, ಬೆಂಗಳೂರು–560 002

**ಬಿ. ಎಸ್. ಚಂದ್ರಶೇಖರ್,** ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ನಗರ ಶಾಖೆ, ಬೆಂಗಳೂರು–560 002

**ಎಚ್. ಜಿ. ಸೋಮಶೇಖರ ರಾವ್,** ವಿಭಾಗ ಮುಖ್ಯರು, ಕೆನರಾ ಬ್ಯಾಂಕ್, ಕನ್ನಿಂಗ್‌ಹ್ಯಾಮ್ ರಸ್ತೆ, ಬೆಂಗಳೂರು–560 052

**ಎಂ. ಎಸ್. ಕಾಮತ್,** ಹಿರಿಯ ವ್ಯವಸ್ಥಾಪಕ, ಕೆನರಾ ಬ್ಯಾಂಕು, ದಕ್ಷಿಣ ವೃತ್ತ ಕಛೇರಿ, ಬೆಂಗಳೂರು–560 001

**ಪು. ರಾ. ಮುರಳೀಧರ,** ಕೆನರಾ ಬ್ಯಾಂಕ್, ದಕ್ಷಿಣ ವೃತ್ತ ಕಛೇರಿ, ಬೆಂಗಳೂರು–560 001

**ಪಾ. ರಾಜಗೋಪಾಲ,** ಪ್ರಧಾನ ಕಾರ್ಯದರ್ಶಿಗಳಲ್ಲೊಬ್ಬರು, ಸಮನ್ವಯ ಸಮಿತಿ

## ಬ್ಯಾಂಕಿಂಗ್ ಪ್ರಪಂಚದ ಆಜೀವ ಸದಸ್ಯರು

(ಹಿಂದಿನ ಸಂಚಿಕೆಯಿಂದ)

57 ರಾಮಕೃಷ್ಣರಾವ್

58 ಕೆ. ಎಸ್. ಮಹಾಬಲ

59 ದಿ ಕಂಟ್ರೋಲರ್ಸ್ ಆಫೀಸ್ ಕೋ–ಆಪರೇಟಿವ್ ಬ್ಯಾಂಕ್ ಲಿಮಿಟೆಡ್ ಬೆಂಗಳೂರು–560 002

60 ದಿ ಸೌತ್ ಕೆನರಾ ಡಿಸ್ಟ್ರಿಕ್ಟ್ ಸೆಂಟ್ರಲ್ ಕೋ–ಆಪರೇಟಿವ್ ಬ್ಯಾಂಕ್ ಲಿಮಿಟೆಡ್ ಮಂಗಳೂರು–575 003

61 ವೈ. ವಿ. ಕೇಶವಮೂರ್ತಿ

62 ಅಖಿಲ ಭಾರತ ಸ್ಟೇಟ್ ಬ್ಯಾಂಕ್ ಅಧಿಕಾರಿಗಳ ಮಹಾ ಸಂಘ ಬೆಂಗಳೂರು–560 001

63 ಎಂ. ವಿ. ಎಂ. ಪ್ರಸಾದ್

64 ನವರತ್ನ ವಿ. ಮಧುಕರ

65 ಹು. ವಾ. ಶ್ರೀಪ್ರಕಾಶ

66 ಎಂ. ಇಂದ್ರಾಣಿ

67 ಟಿ. ಕೆ. ರಂಗನಾಥ್

68 ವಿರ್ಲೆ ಸುದರ್ಶನ

ನಮ್ಮ ಓದುಗರು ಹೆಚ್ಚು ಸಂಖ್ಯೆಯಲ್ಲಿ ಆಜೀವ ಸದಸ್ಯರಾಗುವ ಮೂಲಕ ಬ್ಯಾಂಕಿಂಗ್ ಪ್ರಪಂಚವನ್ನು ಬಲಪಡಿಸಬೇಕೆಂದು ಕೋರುತ್ತೇವೆ.

ಆಜೀವ ಸದಸ್ಯತ್ವದ ಚಂದಾ ರೂ. 100ನ್ನು **"ಸಮನ್ವಯ ಸಮಿತಿ"**ಯ ಹೆಸರಿಗೆ ಬರೆದ ಚೆಕ್ ಅಥವಾ ಡ್ರಾಫ್ಟ್ ಮೂಲಕ ಕಳುಹಿಸಿ.

**ಸಮನ್ವಯ ಸಮಿತಿ (ರಿ.)**
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
**ದ್ವಾರಾ: ಭಾರತೀಯ ಸ್ಟೇಟ್ ಬ್ಯಾಂಕ್**
ಬೆಂಗಳೂರು ನಗರ ಶಾಖೆ
೨೨, ಜಯಚಾಮರಾಜ ಒಡೆಯರ್ ರಸ್ತೆ, ಬೆಂಗಳೂರು-೫೬೦ ೦೦೨

## ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯ ಪ್ರಕಟಣೆಯಲ್ಲಿ

## ಒಂದು ಅಪೂರ್ವ ಸಾಧನೆ

## ಸರಳ ಶೈಲಿಯ ಸಚಿತ್ರ ಸಮೀಚೀನ ಸಾಹಿತ್ಯಿಕ ಕೊಡುಗೆ

### ನಮ್ಮ ಪ್ರಕಟಣೆಗಳು

| | | | | |
|---|---|---|---|---|
| ೧. | ಅದೃಷ್ಟವೆ? ಅನ್ವೇಷಣೆಯೆ?* | .... | ಶ್ರೀ ಸೂ. ಸುಬ್ರಹ್ಮಣ್ಯಂ | 1.50 |
| ೨. | ಆಹಾರದ ಅಂತರಂಗ* | .... | ಶ್ರೀ ಕಿ. ಶಾ. ರಘುನಂದನ | 1.50 |
| ೩. | ಇದ್ದಲಿನಿಂದ ವಜ್ರದವರೆಗೆ* | .... | ಶ್ರೀ ಎಸ್. ವೆಂಕಟೇಶಮೂರ್ತಿ | 1.50 |
| ೪. | ಇಂಧನಗಳು | .... | ಶ್ರೀ ಜಿ. ವಿ. ಅರುಣ | 1.00 |
| ೫. | ಗಣಕ ಯಂತ್ರಗಳು** | .... | ಶ್ರೀ ಸಿ. ವಿ. ಶ್ರೀನಾಥಶಾಸ್ತ್ರಿ | 1.00 |
| ೬. | ನಿದ್ರಾಪ್ರಪಂಚ** | .... | ಶ್ರೀ ಹೆಚ್. ಆರ್. ಕೃಷ್ಣಮೂರ್ತಿ | 1.00 |
| ೭. | ವಿಮಾನಗಳು** | .... | ಶ್ರೀ ಜಿ. ಎಸ್. ಶ್ರೀನಾಥ್ | 1.00 |
| ೮. | ಸಾಗರದ ಸಂಪತ್ತು | .... | ಡಾ॥ ನಾರಾಯಣ ಮಹಿಷಿ | 1.00 |
| ೯. | ಸೂಕ್ಷ್ಮಾಣುಗಳ ಸಂಸಾರ** | .... | ಡಾ॥ ಕೆ. ಜೆ. ರಾವ್ | 1.00 |
| ೧೦. | ಸಂಪರ್ಕದ ಸೋಜಿಗಗಳು** | .... | ಕು॥ ಶ್ರೀಲೇಖಾ | 1.00 |
| ೧೧. | ಸಂಶೋಧನೆ-ಶ್ರೀಸಾಮಾನ್ಯ** | .... | ಡಾ॥ ಕೆ. ವಿ. ಎಲ್. ರಾವ್ | 1.00 |
| ೧೨. | ಹುಲ್ಲಿನಿಂದ ಹೊನ್ನು** | .... | ಡಾ॥ ಎಂ. ಆರ್. ನಾರಾಯಣ | 1.00 |
| ೧೩. | ರಕ್ತದ ಕಥೆ* | .... | ಶ್ರೀ ಸೂ. ಸುಬ್ರಹ್ಮಣ್ಯಂ | 3.00 |
| ೧೪. | ಭೂಮಿಯ ಅಂತರಾಳ | .... | ಶ್ರೀ ಟಿ. ಆರ್. ಅನಂತರಾಮು | 1.50 |
| ೧೫. | ನಿಮ್ಮ ಮನಸ್ಸಿನ ವ್ಯಾಪಾರಗಳು* | .... | ಡಾ॥ ಸಿ. ಶಾಮಸುಂದರ್ | 2.00 |
| ೧೬. | ವಿದ್ಯುಚ್ಛಕ್ತಿ | .... | ಶ್ರೀ ಜಿ. ಮೃತ್ಯುಂಜಯ | 1.50 |
| ೧೭. | ಗಣಕ ಎಂದರೇನು? | .... | ಡಾ॥ ನಳಿನಿ ಮೂರ್ತಿ | 3.00 |
| ೧೮. | ಬೊಜ್ಜು** | .... | ಡಾ॥ ಎಸ್. ಬಿ. ವಸಂತಕುಮಾರ್ | 1.50 |
| ೧೯. | ಸಸ್ಯಜೀವಿ-ಪ್ರಾಣಿಜೀವಿ | .... | ಡಾ॥ ಬಿ. ಜಿ. ಎಲ್. ಸ್ವಾಮಿ | 2.00 |
| ೨೦. | ಯೋಚಿಸಿದರೆ | .... | ಡಾ॥ ಎಂ. ಶಿವರಾಂ | 3.50 |
| ೨೧. | ಆಸ್ತಮ | .... | ಡಾ॥ ಓಂಪ್ರಕಾಶ್ | 6.00 |
| ೨೨. | ವಿಜ್ಞಾನ ಮತ್ತು ಅಂಧಶ್ರದ್ಧೆ | .... | ಡಾ॥ ಶಿವರಾಮ ಕಾರಂತ | 1.50 |
| ೨೩. | ನಕ್ಕಿತು ನಕ್ಷತ್ರ | .... | ಸೂ. ಸುಬ್ರಹ್ಮಣ್ಯಂ | (ಅಚ್ಚಿನಲ್ಲಿ) |
| ೨೪. | ನಮ್ಮ ಮೈಯಲ್ಲೊಂದು ಸಮುದ್ರ | .... | ಡಾ॥ ಡಿ. ಎಸ್. ಶಿವಪ್ಪ | ,, |
| ೨೫. | ನಮ್ಮ ವಾತಾವರಣ | .... | ಶ್ರೀ ಅಡ್ಯನಡ್ಕ ಕೃಷ್ಣಭಟ್ಟ | ,, |

* 2/3ನೇ ಮುದ್ರಣ  ** ಪ್ರತಿಗಳು ಮುಗಿದಿವೆ

## ಕನ್ನಡ ವಿಜ್ಞಾನ ಪರಿಷತ್ತು

**'ವನಸುಮ', 711, 4ನೇ ಬ್ಲಾಕು, ಜಯನಗರ**

**ಬೆಂಗಳೂರು-560 011**

# ಕರ್ನಾಟಕದಲ್ಲಿ ನಗರೀಯ ಸಹಕಾರಿ ಬ್ಯಾಂಕುಗಳು

ಎಂ. ಬಿ. ಪಾಟೀಲ್

ಸ್ವಾತಂತ್ರ್ಯಾನಂತರ ಕರ್ನಾಟಕದಲ್ಲಿ ಕೃಷಿಗೆ ಧನ ಪೋಷಣೆ ನೀಡುವಲ್ಲಿ ಸಹಕಾರಿ ಬ್ಯಾಂಕುಗಳು ಮಹತ್ತರ ಪ್ರಗತಿ ಸಾಧಿಸಿವೆ. ರಾಜ್ಯದ ಕೃಷಿಕರ ಸಾಲದ ಆವಶ್ಯಕತೆಗಳನ್ನು ಸಹಕಾರಿ ಸಂಸ್ಥೆಗಳು ಬಹು ಮಟ್ಟಿಗೆ ಭರಿಸಿವೆ ಮಾತ್ರವಲ್ಲ; ಕೃಷಿಕರನ್ನು ಮಧ್ಯವರ್ತಿಗಳ ಕಪಿ ಮುಷ್ಟಿಯಿಂದ ಬಿಡುಗಡೆ ಮಾಡಿವೆ. ಕರ್ನಾಟಕದಲ್ಲಿ ದೀರ್ಘಾವಧಿ ಸಾಲದ ಆವಶ್ಯಕತೆಗಳನ್ನು ಭೂ ಅಭಿವೃದ್ಧಿ ಬ್ಯಾಂಕುಗಳು ಪೂರೈಸಿದರೆ, ಮಧ್ಯಮಾವಧಿ ಮತ್ತು ಅಲ್ಪಾವಧಿ ಸಾಲದ ಆವಶ್ಯಕತೆಗಳನ್ನು ಸಹಕಾರಿ ಸಂಘಗಳು ಪೂರೈಸುತ್ತವೆ. ಇವುಗಳಲ್ಲಿ ಜಿಲ್ಲಾ ಕೇಂದ್ರ ಬ್ಯಾಂಕುಗಳು ಮತ್ತು ಪ್ರಾಥಮಿಕ ಕೃಷಿ ಉದರಿ ಸಹಕಾರಿ ಸಂಘಗಳು ಪ್ರಮುಖ ಪಾತ್ರ ವಹಿಸುತ್ತವೆ.

ಆದಾಗ್ಯೂ ಕರ್ನಾಟಕದಲ್ಲಿ ಪಟ್ಟಣ ಪ್ರದೇಶದಲ್ಲಿ ಸಣ್ಣ ಕೈಗಾರಿಕೆ ಮತ್ತು ಗುಡಿ ಕೈಗಾರಿಕೆಗಳ ಸಾಲದ ಆವಶ್ಯಕತೆಗಳಿಗೆ ಸಾಕಷ್ಟು ಗಮನವನ್ನು ಕೊಟ್ಟಿಲ್ಲ. ಈ ಕಾರಣದಿಂದಾಗಿ ರಾಜ್ಯ ಅರ್ಥ ವ್ಯವಸ್ಥೆಯ ಪ್ರಮುಖ ಅಂಶವಾದ ಇದು ತನ್ನ ಬೆಳವಣಿಗೆಗೆ ತಕ್ಕ ಸಾಂಸ್ಥಿಕ ಧನ ಪೋಷಣೆ ಇಲ್ಲದೆ ಹೆಚ್ಚಿಗೆ ಕುಂಠಿತವಾಗಿದೆ. ಇತ್ತೀಚಿನ ವರೆಗೆ ನಗರ ಪ್ರದೇಶದಲ್ಲಿರುವ ಸಣ್ಣ ಉದ್ಯಮಿಗಳಿಗೆ ಧನ ಪೋಷಣೆ ನೀಡುವ ಅಭಿವೃದ್ಧಿ ಹೊಂದಿದ ಸಾಂಸ್ಥಿಕ ಸಂರಚನೆ ಯಾವುದೂ ಬೆಳೆಯಲಿಲ್ಲ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿಯ ಸಣ್ಣ ಉದ್ಯಮಿಗಳಿಗೆ, ಸಣ್ಣ ಕೈಗಾರಿಕೆ ಮತ್ತು ಗುಡಿ ಕೈಗಾರಿಕೆಯವರಿಗೆ, ಕುಶಲ ಕರ್ಮಿಗಳಿಗೆ ಮತ್ತು ಸ್ವ ಉದ್ಯೋಗಿಗಳಿಗೆ ನಗರೀಯ ಸಹಕಾರಿ ಬ್ಯಾಂಕುಗಳು ಆಶಾ ಕಿರಣವಾಗಿ ಪರಿಣಮಿಸಿದುವು.

## ರಾಜ್ಯದ ಚಿತ್ರ

ರಾಷ್ಟ್ರದಲ್ಲೇ ಹೆಚ್ಚು ನಗರೀಯ ಬ್ಯಾಂಕುಗಳಿರುವ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಕೋಷ್ಟಕ 1ರಂತೆ, ಅತಿ ಹೆಚ್ಚಿನ ನಗರೀಯ ಬ್ಯಾಂಕುಗಳನ್ನು ಹೊಂದಿರುವ ರಾಜ್ಯಗಳ ಪೈಕಿ ಕರ್ನಾಟಕ ಮೂರನೆಯದಾಗಿದೆ. ಮೊದಲನೆಯದು ಮಹಾರಾಷ್ಟ್ರ ಮತ್ತು ಎರಡನೆಯದು ಗುಜರಾತು. ರಾಷ್ಟ್ರದ ಒಟ್ಟು ನಗರೀಯ ಬ್ಯಾಂಕುಗಳ ಪೈಕಿ 16.2%ರಷ್ಟು ಕರ್ನಾಟಕದಲ್ಲಿವೆ.

ಕೋಷ್ಟಕ 1

**1979ರಲ್ಲಿ ನಗರೀಯ ಸಹಕಾರಿ ಬ್ಯಾಂಕುಗಳು**

| | | ಒಟ್ಟು ಸಂಖ್ಯೆ | ಯ ಸೇಕಡ |
|---|---|---|---|
| 1 | ಅಖಿಲ ಭಾರತ | 1,143 | |
| 2 | ಗುಜರಾತು | 261 | 22.8 |
| 3 | ಮಹಾರಾಷ್ಟ್ರ | 321 | 28.1 |
| 4 | ಕರ್ನಾಟಕ | 194 | 16.2 |
| 5 | ತಮಿಳು ನಾಡು | 127 | 11.1 |

ಆದರೆ ಜಿಲ್ಲಾವಾರು ಚಿತ್ರವನ್ನು ನೋಡಿದರೆ ಅದರಲ್ಲಿ ಪ್ರಾದೇಶಿಕ ಅಸಮತೆಗಳಿರುವುದು ಕಂಡುಬರುತ್ತದೆ. ಕೋಷ್ಟಕ 2ರ ಪ್ರಕಾರ ಮುಂಬೈ ಕರ್ನಾಟಕ ಪ್ರದೇಶದಲ್ಲಿ ನಗರೀಯ ಸಹಕಾರಿ ಬ್ಯಾಂಕುಗಳು ಕೇಂದ್ರೀಕೃತವಾಗಿರುವುದು ವ್ಯಕ್ತವಾಗುತ್ತದೆ. ಬೆಳಗಾವಿ, ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಇತರ ಜಿಲ್ಲೆಗಳಲ್ಲಿರುವುದಕ್ಕಿಂತ ಹೆಚ್ಚಿನ ಸಹಕಾರಿ ಬ್ಯಾಂಕುಗಳಿವೆ. ರಾಜ್ಯದ ಸಹಕಾರಿ ಬ್ಯಾಂಕುಗಳಲ್ಲಿ ಸುಮಾರು ಅರ್ಧದಷ್ಟು ಈ ಮೂರು ಜಿಲೆಗಳಲ್ಲಿವೆ. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಇವುಗಳ ಸಂಖ್ಯೆ ತೀರಾ ಕಡಿಮೆ. ಕಲ್ಬುರ್ಗಿ, ಬಿದರೆ, ರಾಯಚೂರು ಜಿಲ್ಲೆಗಳಲ್ಲಿ ತಲಾ ಒಂದು ಬ್ಯಾಂಕು ಇದೆ. ಮಂಡ್ಯ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಇತ್ತೀಚಿನ ವರೆಗೆ ಒಂದೂ ಸಹಕಾರಿ ಬ್ಯಾಂಕ್ ಇರಲಿಲ್ಲ. ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಚಿಕ್ಕವಾದರೂ ಅವುಗಳಲ್ಲಿ ನಗರೀಯ ಸಹಕಾರಿ ಬ್ಯಾಂಕುಗಳ ಸಂಖ್ಯೆ ಸುಮಾರಾಗಿದೆ. ಒಂದೊಂದು ಜಿಲ್ಲೆಯಲ್ಲೂ 9 ಬ್ಯಾಂಕುಗಳು ಇವೆ.

ರಾಜ್ಯದ ಕೆಲವೆಡೆಗಳಲ್ಲಿ ಈ ಬ್ಯಾಂಕುಗಳ ಕೇಂದ್ರೀಕರಣವಾಗಿದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಕೋಷ್ಟಕ 2

ಕರ್ನಾಟಕದ ಜಿಲ್ಲೆಗಳ ನಗರೀಯ ಸಹಕಾರಿ ಬ್ಯಾಂಕುಗಳು

30-6-82ರಲ್ಲಿದ್ದಂತೆ

| ಕ್ರಮಸಂಖ್ಯೆ | ಜಿಲ್ಲೆ | ಬ್ಯಾಂಕುಗಳ ಸಂಖ್ಯೆ |
|---|---|---|
| 1 | ಬೆಂಗಳೂರು | 37 |
| 2 | ಬೆಳಗಾವಿ | 39 |
| 3 | ಬಿಜಾಪುರ | 20 |
| 4 | ಬಳ್ಳಾರಿ | 2 |
| 5 | ಬಿದರೆ | 1 |
| 6 | ಚಿಕ್ಕಮಗಳೂರು | – |
| 7 | ಚಿತ್ರದುರ್ಗ | 11 |
| 8 | ಧಾರವಾಡ | 36 |
| 9 | ದಕ್ಷಿಣ ಕನ್ನಡ | 9 |
| 10 | ಗುಲ್ಬರ್ಗ | 1 |
| 11 | ಹಾಸನ | 4 |
| 12 | ಕೊಡಗು | 3 |
| 13 | ಕೋಲಾರ | 2 |
| 14 | ಮಂಡ್ಯ | – |
| 15 | ಮೈಸೂರು | 10 |
| 16 | ರಾಯಚೂರು | 1 |
| 17 | ಶಿವಮೊಗ್ಗ | 7 |
| 18 | ತುಮಕೂರು | 6 |
| 19 | ಉತ್ತರ ಕನ್ನಡ | 9 |
| | | 198 |

**ಪ್ರಗತಿ**

ರಾಜ್ಯದಲ್ಲಿ ನಗರೀಯ ಸಹಕಾರಿ ಬ್ಯಾಂಕುಗಳ ಪ್ರಗತಿ ಕೋಷ್ಟಕ 3ರಲ್ಲಿ ವ್ಯಕ್ತವಾಗುತ್ತದೆ.

**ಮಹಾ ಸಂಘದ ಪಾತ್ರ**

ನಗರೀಯ ಸಹಕಾರಿ ಬ್ಯಾಂಕುಗಳಿಗೆಲ್ಲ ಅನ್ವಯಿಸುವಂತೆ ರಾಜ್ಯಮಟ್ಟದಲ್ಲಿ ಒಂದು ಶೃಂಗ ಸ್ವರೂಪದ ಸಂಘ ಸ್ಥಾಪಿತವಾದ್ದು ಕರ್ನಾಟಕದಲ್ಲೇ ಮೊದಲು. ಇದು 1965ರಲ್ಲಿ ಅಸ್ತಿತ್ವಕ್ಕೆ ಬಂತು. ಮೊದಲು ದಾವಣಗೆರೆಯಲ್ಲಿ ಕೆಲಸವನ್ನು ಆರಂಭಿಸಿದ ಸಂಘ ಅನಂತರ 1980ರಲ್ಲಿ ಬೆಂಗಳೂರಿಗೆ ಬದಲಾಯಿಸಿತು. ಇದರ ಧ್ಯೇಯವೆಂದರೆ ಸದಸ್ಯ ನಗರೀಯ ಬ್ಯಾಂಕುಗಳಿಗೆ ಅವುಗಳಿಗೆ ಬೇಕಾದ ಸೇವೆಗಳನ್ನು ಒದಗಿಸುವುದು. ಸದಸ್ಯ ಬ್ಯಾಂಕುಗಳಲ್ಲಿ ಏಕರೂಪವಾದ ಬ್ಯಾಂಕಿಂಗ್ ಪದ್ಧತಿಗಳನ್ನು ಪ್ರವರ್ತಿಸಲು ಇದು ಉದ್ದೇಶಿಸಿದೆ. ಕಾನೂನು, ಧನ ನೆರವು, ಸದಸ್ಯರಿಗೆ ತಾಂತ್ರಿಕ ಮತ್ತು ಆಡಳಿತ ಹಾಗೂ ವ್ಯವಸ್ಥಾಪನೆಗಳ ಬಗ್ಗೆ ಸಲಹೆ ಇವನ್ನು ಕೊಡಲು ಉದ್ದೇಶಿಸಿದೆ.

ಈ ಉದ್ದೇಶಗಳನ್ನು ತರಬೇತಿ, ಸಂಶೋಧನೆ, ಸಲಹೆ ಮತ್ತು ಪ್ರಕಟಣ ಚಟುವಟಿಕೆಗಳ ಮೂಲಕ ನೆರವೇರಿಸಲು ಮಹಾ ಸಂಘ ಪ್ರಯತ್ನಿಸುತ್ತಿದೆ. ನಗರೀಯ ಬ್ಯಾಂಕುಗಳಲ್ಲಿಯ ವಿವಿಧ ಕಾರ್ಯಕರ್ತರಿಗೆ ನಿಯತವಾಗಿ ತರಬೇತಿಯನ್ನು ಮಹಾ ಸಂಘ ನೀಡುತ್ತದೆ. ಚುನಾಯಿತರಾದ ಸದಸ್ಯ ಬ್ಯಾಂಕುಗಳ ನಿರ್ದೇಶಕರಿಗೆ ಅದು ವಿಚಾರಗೋಷ್ಠಿಗಳನ್ನು ಏರ್ಪಡಿಸುತ್ತದೆ. ಬೇರೆ ಬೇರೆ ಅಧ್ಯಯನಗಳನ್ನು ಇದು ಕೈಗೊಳ್ಳುತ್ತದೆ, ಇವುಗಳಲ್ಲಿ ಕೆಲವನ್ನು ಮಹಾ ಸಂಘವೇ ಕೈಗೊಂಡರೆ ಕೆಲವನ್ನು ಸದಸ್ಯ ಬ್ಯಾಂಕುಗಳ ವಿನಂತಿಯಂತೆ ಕೈಗೊಳ್ಳಲಾಗುವುದು. ರಾಜ್ಯದಲ್ಲಿರುವ ನಗರೀಯ ಸಹಕಾರಿ ಬ್ಯಾಂಕುಗಳ ವ್ಯವಸ್ಥಾಪಕರಿಗಾಗಿ ಕಮ್ಮಟಗಳನ್ನು ಸಹ ಇದು ಏರ್ಪಡಿಸುತ್ತದೆ. ದಿನ ನಿತ್ಯದ ಕೆಲಸದಲ್ಲಿ ಉಂಟಾಗುವ ತೊಂದರೆಗಳಿಗೆ ಮಾರ್ಗದರ್ಶನವನ್ನು ಮಹಾ ಸಂಘದಲ್ಲಿರುವ ಸಲಹಾಕೋಶ ನೀಡುತ್ತದೆ. ಮಹಾ ಸಂಘ ತ್ರೈಮಾಸಿಕ ಗೃಹಪತ್ರಿಕೆಯೊಂದನ್ನು ಪ್ರಕಟಿಸುತ್ತದೆ. ಬ್ಯಾಂಕಿಂಗ್, ಕಾನೂನು ಮತ್ತು ಸಾಂಖ್ಯಿಕ ವಿಷಯಗಳಿಂದ ಕೂಡಿ ಇದು ಉಪಯುಕ್ತವಾಗಿದೆ. ಇದರಲ್ಲಿ ವ್ಯಕ್ತವಾಗುವ ಪ್ರಾಯೋಗಿಕ ದೃಷ್ಟಿಯಿಂದಾಗಿ, ತ್ರೈಮಾಸಿಕ ಗೃಹಪತ್ರಿಕೆ ಸದಸ್ಯರಲ್ಲಿ ಜನಪ್ರಿಯತೆ ಗಳಿಸಿದೆ. ತನ್ನ ರೀತಿಯಲ್ಲಿ ವಿಶಿಷ್ಟವಾದ ಮೂರು ನಗರೀಯ ಸಹಕಾರಿ ಬ್ಯಾಂಕುಗಳ ಕೈಪಿಡಿಗಳನ್ನು ಮಹಾ ಸಂಘ ಪ್ರಕಟಿಸಿದೆ. ನಾಲ್ಕನೆಯ ಸಂಪುಟ ಶೀಘ್ರದಲ್ಲೇ ಬಿಡುಗಡೆಯಾಗಲಿದೆ. ರಾಜ್ಯದಲ್ಲಿರುವ ನಗರೀಯ ಸಹಕಾರಿ ಬ್ಯಾಂಕುಗಳಿಗೆ ಸಂಬಂಧಿಸಿದ ಅಂಕಿ ಅಂಶಗಳನ್ನು ಮಹಾ ಸಂಘ ನಿಯತವಾಗಿ ಪ್ರಕಟಿಸುತ್ತದೆ.

ತರಬೇತಿ, ಸಂಶೋಧನೆ ಮತ್ತು ಸಲಹಾ ಸೇವೆಗಳನ್ನು ನಗರೀಯ ಸಹಕಾರಿ ಬ್ಯಾಂಕುಗಳಿಗೆ ನೀಡುವುದರ ಮೂಲಕ ಮಹಾ ಸಂಘ ತನ್ನ ಧ್ಯೇಯವನ್ನು ಸಾಧಿಸಲು ಪ್ರಯತ್ನಿಸುತ್ತಿದೆ. ಇರುವ 198 ಬ್ಯಾಂಕುಗಳಲ್ಲಿ 168 ಬ್ಯಾಂಕುಗಳು ಮಹಾ ಸಂಘದ ಸದಸ್ಯತ್ವ ಪಡೆದಿವೆ. ಉಳಿದವಕ್ಕೆ ಸದಸ್ಯತ್ವ ನೀಡುವ ಪ್ರಯತ್ನ ನಡೆದಿದೆ.

**ಉಜ್ವಲ ಭವಿಷ್ಯ**

ನಗರೀಯ ಸಹಕಾರಿ ಬ್ಯಾಂಕುಗಳು ತಮ್ಮ ಅಭಿವೃದ್ಧಿಯಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಸಂಪನ್ಮೂಲಗಳ ಕೊರತೆ, ಮಾನವ ಬಲದ ಕೊರತೆ, ಹೆಚ್ಚುತ್ತಿರುವ ಸುಸ್ತಿಗಳು, ಅನೇಕ ಕಾನೂನಿನ ತಡೆಗಳು ಮತ್ತು ರಿಸರ್ವ್ ಬ್ಯಾಂಕಿನ ಕೆಲವು ನಿರ್ದೇಶನಗಳು ನಗರೀಯ

ಕೋಷ್ಟಕ 3

**ಕರ್ನಾಟಕದಲ್ಲಿ ನಗರೀಯ ಸಹಕಾರಿ ಬ್ಯಾಂಕುಗಳ ಪ್ರಗತಿ**

1978-79ರಿಂದ 1980-81ರ ವರೆಗೆ

| | | 30-6-1979 | 30-6-1980 | 30-6-1981 |
|---|---|---|---|---|
| 1 | ನಗರೀಯ ಸಹಕಾರಿ ಬ್ಯಾಂಕುಗಳ ಸಂಖ್ಯೆ | 194 | 195 | 198 |
| 2 | ಶಾಖೆಗಳ ಸಂಖ್ಯೆ | 51 | 56 | 85 |
| 3 | ಸದಸ್ಯರ ಸಂಖ್ಯೆ | 4,86,223 | 5,43,838 | 6,04,340 |
| | ಅ) ಖಾಯಂ ಸದಸ್ಯರು | 3,20,229 | 3,54,407 | 3,87,175 |
| | ಆ) ಸಹ ಸದಸ್ಯರು | 11,130 | 12,736 | 18,157 |
| | ಇ) ನಾಮ ಮಾತ್ರ ಸದಸ್ಯರು | 1,54,864 | 1,76,695 | 1,99,008 |
| 4 | ಪಾವತಿಯಾದ ಷೇರು ಬಂಡವಾಳ (ಸಾವಿರ ರೂ.ಗಳಲ್ಲಿ) | 79,040 | 90,474 | 1,05,904 |
| 5 | ಮೀಸಲು ಮತ್ತು ನಿಧಿಗಳು ,, | 87,401 | 1,01,219 | 1,18,381 |
| 6 | ಠೇವಣಿಗಳು ,, | 65,44,55 | 70,33,22 | 89,61,88 |
| 7 | ಸಾಲಗಳು ,, | 13,968 | 13,671 | 14,024 |
| 8 | ಬಾಕಿಯಿರುವ ಸಾಲಗಳು ,, | 4,54,324 | 5,74,191 | 7,50,036 |
| 9 | ದುಡಿಯುವ ಬಂಡವಾಳ ,, | 6,83,718 | 9,31,689 | 11,41,628 |
| 10 | ಸುಸ್ತಿಗಳು ,, | 67,089 | 74,542 | 83,298 |
| 11 | ಬಾಕಿ ಸಾಲ ಮತ್ತು ಸುಸ್ತಿಗಳಿಗಿರುವ ಸೇಕಡ ಪ್ರಮಾಣ ,, | 15 | 13 | 11 |
| 12 | ಲಾಭ ,, | 18,964 | 23,039 | 29,723 |
| 13 | ವಿದ್ಯಾಭ್ಯಾಸ ನಿಧಿಗೆ ಕೊಡುಗೆ ,, | 262 | 264 | 321 |
| 14 | ಉದ್ಯೋಗಿಗಳ ಸಂಖ್ಯೆ | 2,202 | 2,315 | 2,525 |
| 15 | ತರಬೇತಿ ಪಡೆದ ಉದ್ಯೋಗಿಗಳು | 386 | 439 | 508 |

ಮೇಲಿನ ಅಂಕಿ ಅಂಶಗಳು ರಾಜ್ಯದಲ್ಲಿರುವ ನಗರೀಯ ಬ್ಯಾಂಕುಗಳು ನಿರ್ವಹಿಸುತ್ತಿರುವ ವ್ಯವಹಾರದ ಪ್ರಮಾಣ ಮತ್ತು ಅವುಗಳ ಆರ್ಥಿಕ ಬಲವನ್ನು ತೋರಿಸುತ್ತವೆ. ಇವುಗಳ ದುಡಿಯುವ ಬಂಡವಾಳ ರೂ 141 ಕೋಟಿಗಳಿಗೂ ಹೆಚ್ಚು. ಪಾವತಿಯಾದ ಷೇರು ಬಂಡವಾಳ ಸುಮಾರು 11 ಕೋಟಿ. 1981ರಲ್ಲಿ ಈ ಬ್ಯಾಂಕುಗಳ ಠೇವಣಿಗಳು 99.5 ಕೋಟಿಗಳಿಗಿಂತ ಅಧಿಕವಾಗಿತ್ತು. ನಗರೀಯ ಬ್ಯಾಂಕುಗಳು ರೂ.2,97,00,000 ನಿವ್ವಳ ಲಾಭವನ್ನು ಗಳಿಸಿದುವು. ವಿದ್ಯಾಭ್ಯಾಸ ನಿಧಿಗೆ 1981ರಲ್ಲಿ ಈ ಬ್ಯಾಂಕುಗಳು ರೂ 3 ಲಕ್ಷಕ್ಕಿಂತ ಹೆಚ್ಚಿನ ವಂತಿಗೆಯನ್ನು ಸಲ್ಲಿಸಿವೆ. ನಗರೀಯ ಬ್ಯಾಂಕುಗಳು ರಾಜ್ಯದಲ್ಲಿ 25 ಲಕ್ಷ ಜನರಿಗೆ ಉದ್ಯೋಗವನ್ನು ಒದಗಿಸಿವೆ. ರಾಜ್ಯದಲ್ಲಿ ನಗರೀಯ ಬ್ಯಾಂಕುಗಳ ಯಶಸ್ಸಿನ ನಡೆಯನ್ನು ಇದು ಸೂಚಿಸುತ್ತದೆ.

ಬ್ಯಾಂಕುಗಳ ಅಭಿವೃದ್ಧಿಯಲ್ಲಿ ಅಡೆ-ತಡೆಗಳಾಗಿವೆ. ಈ ಎಲ್ಲ ಸಮಸ್ಯೆಗಳನ್ನು ಎದುರಿಸಲು ಬೆಂಬಲ ನೀಡಿದರೆ ನಗರೀಯ ಸಹಕಾರಿ ಬ್ಯಾಂಕುಗಳು ರಾಜ್ಯದ ನಗರ ಅರ್ಥ ವ್ಯವಸ್ಥೆಯಲ್ಲಿ (ಅರ್ಬನ್ ಎಕಾನಮಿ) ಭವಿಷ್ಯದಲ್ಲೂ ಪ್ರಮುಖ ಪಾತ್ರ ನಿರ್ವಹಿಸಲು ಸಾಧ್ಯವಾಗುತ್ತದೆ.

ಸಣ್ಣ ಕೈಗಾರಿಕೆ ಮತ್ತು ಕುಟೀರ ಕೈಗಾರಿಕೆಗಳಿಗೆ ಬೇಕಾದ ಸಂಪನ್ಮೂಲಗಳು ರಾಜ್ಯದಲ್ಲಿವೆ. ಈ ಕೈಗಾರಿಕೆಗಳು ರಾಜ್ಯದಲ್ಲಿ ಶೀಘ್ರವಾಗಿ ಬೆಳೆಯುತ್ತಿವೆ. ಇವುಗಳಿಗಿರುವ ಮುಖ್ಯ ಕೊರತೆ ಎಂದರೆ ಹಣದ್ದು. ಇವು ರಾಜ್ಯದ ನಗರೀಯ ಸಹಕಾರಿ ಬ್ಯಾಂಕುಗಳ ಕಡೆ ಸಹಾಯಕ್ಕಾಗಿ ನೋಡುತ್ತಿವೆ. ನಗರೀಯ ಸಹಕಾರಿ ಬ್ಯಾಂಕುಗಳು ಯಾವ ಮಟ್ಟದಲ್ಲಿ ಧನ ಪೋಷಣೆ ಮಾಡಿ ಅವುಗಳ ಸಮಸ್ಯೆಗಳನ್ನು ಪರಿಹರಿಸುತ್ತವೆ ಎಂಬುದರ ಮೇಲೆ ಈ ಪ್ರಮುಖ ಕೈಗಾರಿಕೆಗಳ ಉಳಿವು ಮತ್ತು ಯಶಸ್ಸು ನಿಂತಿವೆ.

# ಉದರಿ ಕಾರ್ಡುಗಳು

ಜಿ. ಎಸ್. ನರಸಿಂಹಮೂರ್ತಿ

### ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ಬ್ಯಾಂಕಿಂಗ್ ಸಾಹಿತ್ಯ ರಚನೆಯ ಬಗ್ಗೆ ಏರ್ಪಡಿಸಲಾಗಿದ್ದ ಕಮ್ಮಟದಲ್ಲಿ ಮಂಡಿಸಿದ ಒಂದು ಪ್ರಬಂಧ

ಬೇಕಾದ ವಸ್ತುವನ್ನು ನೀಡುವ ಮಾಯಾ ಪೆಟ್ಟಿಗೆ. ಬೇಕಾದಲ್ಲಿಗೆ ನಿಮ್ಮನ್ನು ಕರೆದೊಯ್ಯುವ ಮಾಯಾ ಕಂಬಳಿ. ಇದು ಬಾಲ್ಯದಲ್ಲೋದಿದ ಕಥೆಯಲ್ಲ, ಬ್ಯಾಂಕುಗಳು ಇದನ್ನು ವಾಸ್ತವವಾಗಿಸಲು ಪ್ರಯತ್ನಿಸುತ್ತಿವೆ.

ಇದ್ದ ಸ್ಥಿತಿಯಲ್ಲೇ ಇರಬೇಕಾದರೂ ಓಡಬೇಕಾಗಿರುವ ಈ ವೇಗದ ಯುಗದಲ್ಲಿ ಸ್ಪರ್ಧೆ ಅನಿವಾರ್ಯ.

ಗ್ರಾಹಕರನ್ನು ತಮ್ಮತ್ತ ಸೆಳೆದುಕೊಳ್ಳಲು ಎಲ್ಲಾ ಬ್ಯಾಂಕುಗಳು ವಿಶಿಷ್ಟ ಯೋಜನೆಗಳನ್ನು ರೂಪಿಸುತ್ತಿವೆ. ಹೊಸ ಹೊಸ ಸೇವೆಗಳನ್ನು ಅನ್ವೇಷಿಸುತ್ತಿವೆ. ಇಂತಹ ಒಂದು ಅನ್ವೇಷಣೆಯಾಗಿ 'ಉದರಿ ಕಾರ್ಡು' ಜನ್ಮ ತಳೆಯಿತು— ಪಾಶ್ಚಾತ್ಯ ದೇಶದಲ್ಲಿ.

ಕೇವಲ ಈ ಕಾರ್ಡನ್ನಿಟ್ಟುಕೊಂಡು ಹೊರ ಹೊರಟರೆ ಸಾಕು, ಬೇಕಾದ ಟಿ.ವಿ., ಫ್ರಿಜ್, ವಿಮಾನ ಟಿಕೆಟ್ಟುಗಳು, ಮನಸೆಳೆವ ತೈಲ ಚಿತ್ರ, ಅಪರೂಪದ ಕಲಾಕೃತಿ ನಿರಾಯಾಸವಾಗಿ ಮನೆ ಸೇರುತ್ತವೆ. ಕೊಂಚ ಬುದ್ಧಿವಂತಿಕೆಯಿಂದ ಕಾರ್ಡಿನ ಬ್ಯಾಂಕ್ ವ್ಯವಹಾರವನ್ನು ರೂಪಿಸಿಕೊಂಡರೆ ಈ ಯೋಜನೆ ನಿಜಕ್ಕೂ ಲಾಭಕಾರಿಯಾಗಬಲ್ಲದು.

ಕಂಪನಿಯ ಸಲುವಾಗಿ ಪ್ರವಾಸ ಹೊರಡಬೇಕಾದಾಗ ಹಣದ ತರಾತುರಿಯಿಲ್ಲ, ಬ್ಯಾಂಕಿಗೆ ಅವಸರವಿಲ್ಲ, ಒಟ್ಟಾರೆ ಅನಾವಶ್ಯಕವಾದ ಬೇಗುದಿ ಇಲ್ಲ. (ಬ್ಯಾಂಕ್ ಉದರಿ ಪತ್ರ—ಉದರಿ ಕಾರ್ಡು—ಒಂದನ್ನು ಕಂಪನಿ ನಿಮಗೆ ನೀಡಿದರೆ ಸಾಕು.)

**ಯೋಜನೆಯ ಸ್ವರೂಪ**

ಅತ್ಯಾಕರ್ಷಕವಾಗಿ ಕಾಣುವ ಈ ಯೋಜನೆಯ ಬಗ್ಗೆ ಕೊಂಚ ವಿವರವಾಗಿ ಪರಿಶೀಲಿಸುವುದು ಆವಶ್ಯಕ ಎನಿಸುತ್ತದಲ್ಲವೆ?

ಬ್ಯಾಂಕುಗಳ ಈ ಯೋಜನೆಯ ಜಾಲದಲ್ಲಿ ಅಸಂಖ್ಯ ಚಿಲ್ಲರೆ ವ್ಯಾಪಾರಿಗಳು, ಅನೇಕ ವಿಶಿಷ್ಟ ಸೇವಾ ವ್ಯವಸ್ಥೆಗಳು ಪಾಲುಗೊಂಡಿರುತ್ತವೆ. ಕೇವಲ ಕೈಗಾರಿಕೋದ್ಯಮವನ್ನು ಮುಖ್ಯ ಕಾರ್ಯಕ್ಷೇತ್ರವಾಗಿರಿಸಿಕೊಂಡ ಬ್ಯಾಂಕುಗಳ ಕಾರ್ಯವ್ಯಾಪ್ತಿ ಈ ಯೋಜನೆಯಿಂದ ಬಹುವಾಗಿ ಹೆಚ್ಚುತ್ತದೆ. ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಚಿಲ್ಲರೆ ವ್ಯಾಪಾರಿಗಳಿಂದ, ವಿಶಿಷ್ಟ ಸೇವಾ ವ್ಯವಸ್ಥೆಗಳಿಂದ, ಉದರಿ ಕಾರ್ಡುದಾರ ತನಗೆ ಬೇಕಾದ ಸರಕು ಸೇವೆಗಳನ್ನು ಪಡೆಯಲು ಅರ್ಹನಾಗಿರುತ್ತಾನೆ. ಅದಕ್ಕೆ ತತ್‌ಕ್ಷಣ ಹಣ ಪಾವತಿ ಮಾಡಬೇಕಾದ ರಗಳೆಯಿಲ್ಲ.

ಇಂತಹ ಕಾರ್ಡುಗಳನ್ನು ಅವು ಈಗಿರುವ ರೂಪದಲ್ಲಿ 1951ರಿಂದೀಚೆಗೆ ಪಾಶ್ಚಾತ್ಯ ದೇಶಗಳ ಬ್ಯಾಂಕುಗಳು ಹೊರತಂದುವು.

ತನ್ನ ಬ್ಯಾಂಕಿನ ವಿಶೇಷ ಚಿಹ್ನೆ, ವಿಶೇಷ ರೀತಿಯಲ್ಲಿ ಮುದ್ರಿಸಿಕೊಳ್ಳಲಾದ ಕಾರ್ಡುದಾರನ ಸಹಿಗಳು ಇವು ಸಾಮಾನ್ಯವಾಗಿ ಉದರಿ ಕಾರ್ಡಿನಲ್ಲಿರುತ್ತವೆ.

ಕಾರ್ಡು ಹೊಂದಬಯಸುವವರು ಬ್ಯಾಂಕಿಗೆ ಈ ಬಗ್ಗೆ ಸಲ್ಲಿಸಿದ ಅರ್ಜಿಯನ್ನು ಬ್ಯಾಂಕಿನ ವ್ಯವಸ್ಥಾಪಕ ವರ್ಗದವರು ಪರಿಶೀಲಿಸಿ, ಅರ್ಹವೆಂದು ಕಂಡುಬಂದಲ್ಲಿ ಉದರಿ ಕಾರ್ಡನ್ನು ನೀಡುತ್ತಾರೆ. ಅರ್ಜಿದಾರರು ಆ

ಬ್ಯಾಂಕಿನ ಶಾಖೆಯೊಂದರಲ್ಲಿ ಖಾತೆಯೊಂದನ್ನು ತೆರೆಯ ಬೇಕಾಗುತ್ತದೆ.

ಇಷ್ಟಾದರೆ ಆಯಿತು. ಉದರಿ ಕಾರ್ಡಿನ ಸೌಲಭ್ಯ ದೊರೆತಂತಾಯಿತು. ಬ್ಯಾಂಕು ಉದರಿ ಕಾರ್ಡನ್ನು ಆದರಿಸುವ ವ್ಯಾಪಾರಿಗಳ ಹಾಗೂ ಸೇವಾ ಸಂಸ್ಥೆಗಳ ಪಟ್ಟಿಯೊಂದನ್ನು ನೀಡುತ್ತದೆ.

ಈ ವ್ಯಾಪಾರಿಗಳು ಹಾಗೂ ಸೇವಾ ಸಂಸ್ಥೆಗಳವರು ಕೂಡ ಈ ವಿಷಯವನ್ನು (ಬ್ಯಾಂಕ್ ಕಾರ್ಡನ್ನು ಆದರಿಸುವ ವಿಚಾರವನ್ನು) ಸೂಕ್ತ ಸಂಕೇತಗಳ ಪ್ರದರ್ಶನದ ಮೂಲಕ ಪ್ರಕಟಿಸುತ್ತಾರೆ.

ಇನ್ನೇನು? ಕಾರ್ಡುದಾರರು ಅಲ್ಲಿಗೆ ಹೋಗುವುದೊಂದೇ ಬಾಕಿ. ಪದಾರ್ಥ ದೊರೆತಂತೆ.

ಕಾರ್ಡುದಾರರು ಹೋಗುವ ಇಂಥ ಎಲ್ಲ ಅಂಗಡಿಗಳೂ ಸೇವಾಸಂಸ್ಥೆಗಳೂ ಬ್ಯಾಂಕಿನಲ್ಲಿ ಖಾತೆ ತೆರೆದಿದ್ದು ಅದರೊಂದಿಗೆ ಸಂಪರ್ಕವಿರಿಸಿಕೊಂಡಿರುತ್ತವೆ. ಕಾರ್ಡುದಾರ ತನ್ನ ಅಗತ್ಯ ವಸ್ತುಗಳ ಅಥವಾ ಸೇವೆಗಳ ಪಟ್ಟಿಯ ಜೊತೆಗೆ ಉದರಿ ಕಾರ್ಡನ್ನು ತೋರಿಸಿದರೆ ಅಂಗಡಿ ಅಥವಾ ಸೇವಾಸಂಸ್ಥೆಗಳು ಅದನ್ನು ಯಂತ್ರವೊಂದರಲ್ಲಿರಿಸಿ ಅದರ ಪಡಿಯಚ್ಚು ಮೂಡಿಸಿ ಪಡಿಯಚ್ಚಿನ ಮೆಲೆ ಕಾರ್ಡುದಾರನ ಸಹಿ ತೆಗೆದುಕೊಳ್ಳುತ್ತದೆ.

ಮೂಲ ಸರಕುಪಟ್ಟಿಯ ಮೇಲೆ ಸಹಿ ಹಾಕಿದರೆ ಸಾಕು. ಸರಕುಪಟ್ಟಿಯ ಒಂದು ಪ್ರತಿ ಹಾಗೂ ಸರಕುಗಳು ಕಾರ್ಡುದಾರನಿಗೆ ಸಲ್ಲುತ್ತವೆ. ಇಲ್ಲಿಗೆ ಕಾರ್ಡುದಾರನ ಮಟ್ಟಿಗೆ ವ್ಯವಹಾರ ಮುಗಿದಂತೆ, ನಿಶ್ಚಿಂತೆಯಿಂದ ಅವನು ತನ್ನ ದಾರಿ ಹಿಡಿಯಬಹುದು.

ಖರೀದಿಸಿದ ಸರಕುಗಳ ಪಟ್ಟಿ ಹಾಗೂ ಮೊಬಲಗುಗಳನ್ನು ಅನಂತರ ಬ್ಯಾಂಕಿಗೆ ಕಳಿಸಲಾಗುತ್ತದೆ. ಆ ಕೂಡಲೇ ಬ್ಯಾಂಕು ಮೊಬಲಗನ್ನು ಸಂಬಂಧಪಟ್ಟವರಿಗೆ ಪಾವತಿ ಮಾಡುತ್ತದೆ. ಬ್ಯಾಂಕು ವಟಾವಣೆ ಕರಾರನ್ನು ಮುಂಚೆಯೇ ಮಾಡಿಕೊಂಡಿದ್ದು, ಹೀಗೆ ಪಾವತಿ ಮಾಡುವಾಗ ಸಾಮಾನ್ಯವಾಗಿ ತನ್ನ ವಟ್ಟವನ್ನು ಮುರಿದುಕೊಂಡೇ ಪಾವತಿ ಮಾಡುತ್ತದೆ.

ಅನಂತರ, ಕಾರ್ಡು ನೀಡಿದಾಗ ಮಾಡಿಕೊಂಡ ಒಪ್ಪಂದದಂತೆ, ನಿಶ್ಚಿತ ಅವಧಿಯ ಅನಂತರ ಕಾರ್ಡುದಾರನ ಖಾತೆಯನ್ನು ಬ್ಯಾಂಕು ಖುಣಿಸಿ, ಅವನು ಖರೀದಿಸಿದ ಸರಕಿನ ಬೆಲೆಯನ್ನು ಅವನಿಂದ ಪಡೆದುಕೊಳ್ಳುತ್ತದೆ. ನಿಶ್ಚಿತ ಅವಧಿಯ ಅನಂತರವೂ ಹಣ ಪಾವತಿಯಾಗದಿದ್ದರೆ ಅದನ್ನು ಬ್ಯಾಂಕು ತನ್ನ ಎಂದಿನ ವ್ಯಾವಹಾರಿಕ ಸಾಲ ಎಂದು ಭಾವಿಸಿ ಬಡ್ಡಿಯನ್ನು ವಿಧಿಸುತ್ತದೆ. ಬಡ್ಡಿಯನ್ನು ತೆರಲು ಕಾರ್ಡುದಾರ ಸಿದ್ಧವಿದ್ದರೆ ಅನೇಕ ಕಂತುಗಳಲ್ಲಿ ಆ ಹಣವನ್ನು ಹಿಂದಿರುಗಿಸಬಹುದು.

ಹೀಗೆ ಉದರಿ ಕಾರ್ಡಿನಿಂದ ಕಾರ್ಡುದಾರರಿಗೆ ಸುರಕ್ಷಿತ ರೀತಿಯ ಸರಕು ಸೇವೆಯ ಖರೀದಿ ಸೌಲಭ್ಯ ದೊರೆತಂತಾಯಿತು.

ಇಷ್ಟೇ ಅಲ್ಲದೆ ತೀರಾ ಆವಶ್ಯಕವೆನಿಸಿದಾಗ ಉದರಿ ಕಾರ್ಡುದಾರ ಬ್ಯಾಂಕಿನಿಂದ ನೆಗದನ್ನೂ ಪಡೆಯಬಹುದು. ಈ ಕೈಸಾಲವನ್ನು ನಿಶ್ಚಿತ ಅವಧಿಯ ಒಳಗೆ ತೀರಿಸಿದರೆ ಬಡ್ಡಿ ತೆರಬೇಕಾಗಿಲ್ಲ.

ಇನ್ನು ಕಾರ್ಡುದಾರ ಹಾಗೂ ಬ್ಯಾಂಕ್ ನಡುವಣ ಸಂಬಂಧಗಳನ್ನು ಕೊಂಚ ಗಮನಿಸೋಣ. ಗ್ರಾಹಕರಿಗೆ ಬ್ಯಾಂಕು ಉದರಿ ಕಾರ್ಡನ್ನು ನೀಡುವಾಗ ಆ ಸೌಲಭ್ಯ ಪಡೆಯಲು ಅವರು ಎಲ್ಲ ರೀತಿಯಿಂದ ಅರ್ಹರೇ ಎಂಬುದನ್ನು ಕೂಲಂಕಷವಾಗಿ ಪರಿಶೀಲಿಸುತ್ತದೆ. ಕಾರ್ಡುದಾರರಾದ ಅನಂತರ, ಕಾರ್ಡಿನ ಮೊದಲನೆಯ ಉಪಯೋಗದೊಂದಿಗೆ ಕಾರ್ಡುದಾರ–ಬ್ಯಾಂಕ್ ಸಂಬಂಧ ಊರ್ಜಿತಗೊಳ್ಳುತ್ತದೆ. ಕಾರ್ಡಿನ ಮೂಲಕ ನೀವು ಪಡೆದ ಸರಕು ಅಥವಾ ಸೇವೆಯ ಗುಣಮಟ್ಟಕ್ಕೆ ಬ್ಯಾಂಕು ಹೊಣೆಯಾಗುವುದಿಲ್ಲ. ಕಾರ್ಡುದಾರ ಹಾಗೂ ವ್ಯಾಪಾರಿಗಳ ನಡುವಣ ಯಾವುದೇ ವಿವಾದದಲ್ಲೂ ಬ್ಯಾಂಕನ್ನು ಹೊಣೆಗೆ ಒಳಪಡಿಸಲಾಗುವುದಿಲ್ಲ.

ಕಾರ್ಡಿನ ಮೂಲಕ ಕೊಂಡ ಸರಕು-ಸೇವೆಗಳ ಮೊಬಲಗು ಆ ಕ್ಷಣದಿಂದಲೇ ಬ್ಯಾಂಕಿಗೆ ಪಾವತಿಯಾಬೇಕಾಗದ ಸಾಲವಾಗಿ ಮಾರ್ಪಡುತ್ತದೆ.

ಅಕಸ್ಮಾತ್ ಕಾರ್ಡು ಕಳೆದುಹೋದರೆ ಅತ್ಯಂತ ತುರ್ತಾಗಿ ಈ ವಿಷಯವನ್ನು ಬ್ಯಾಂಕಿಗೆ ತಿಳಿಸುವುದು ಕಾರ್ಡುದಾರನ ಕರ್ತವ್ಯವಾಗಿರುತ್ತದೆ. ಏಕೆಂದರೆ, ಕಾರ್ಡು ಕಳೆದ ಅನಂತರ, ಆದರೆ ಬ್ಯಾಂಕಿಗೆ ಆ ವಿಷಯ ತಿಳಿಸುವ ಮುನ್ನ, ಕಾರ್ಡಿನ ಮೂಲಕ ಪಡೆದ ಎಲ್ಲ ವ್ಯವಹಾರಗಳಿಗೆ ಕಾರ್ಡುದಾರ ಜವಾಬ್ದಾರನಾಗಿರುತ್ತಾನೆ. ಆದ್ದರಿಂದ ಕಾರ್ಡನ್ನು ಸುರಕ್ಷಿತವಾಗಿಟ್ಟುಕೊಳ್ಳುವುದು ಕಾರ್ಡುದಾರನ ಒಳಿತಿಗಾಗಿಯೇ ಆವಶ್ಯಕವಾಗಿರುತ್ತದೆ.

ಎಲ್ಲ ಖರೀದಿಗಳನ್ನು ಪ್ರತ್ಯೇಕವಾಗಿ ನಮೂದಿಸಿರುವ ತಃಖ್ತೆಯೊಂದನ್ನು ಮಾಸಾಂತ್ಯದಲ್ಲಿ ಬ್ಯಾಂಕು ನೀಡುತ್ತದೆ. ಇದರಿಂದ ಮುಂದಿನ ಮಾಹೆಯ ವೆಚ್ಚವನ್ನು ಹೆಚ್ಚು ಯೋಜಿತವಾಗಿ ರೂಪಿಸಿಕೊಳ್ಳಲು ಅನುವಾಗುತ್ತದೆ.

**ಆಕ್ಷೇಪಣೆಗಳು**

ಉದರಿ ಕಾರ್ಡಿನ ಯೋಜನೆಯ ಬಗ್ಗೆ ಒಂದೆರಡು ಪ್ರಮುಖ ಆಕ್ಷೇಪಣೆಗಳಿವೆ: (i) ಈ ಸೌಲಭ್ಯ ಕಾರ್ಡು

ದಾರರ ಖರ್ಚಿನ ಪ್ರವೃತ್ತಿಯನ್ನು ಸಿಕ್ಕಾಬಟ್ಟೆ ಹೆಚ್ಚಿಸಿ ಕೊನೆಗೆ ಅವರಿಗೆ ತೊಂದರೆ ಉಂಟುಮಾಡುತ್ತದೆ, ಹಾಗೂ (ii) ಬೆಲೆ ಏರಿಕೆಗೆ ಕಾರಣವಾಗುತ್ತದೆ, ತನ್ಮೂಲಕ ಹಣದುಬ್ಬರಕ್ಕೆ ತನ್ನ ಕಾಣಿಕೆ ಸಲ್ಲಿಸುತ್ತದೆ.

ಈ ಎರಡೂ ಆಕ್ಷೇಪಣೆಗಳಿಗೆ ತಜ್ಞರು ಸೂಕ್ತವೆನಿಸ ಬಹುದಾದ ಉತ್ತರ ನೀಡಿದ್ದಾರೆ.

ಕಾರ್ಡುದಾರರ ಖರ್ಚಿನ ಪ್ರವೃತ್ತಿ ಈ ಸೌಲಭ್ಯದಿಂದ ತತ್‌ಕ್ಷಣದ ಉತ್ಸಾಹದಲ್ಲಿ ಕೊಂಚ ಹಿಗ್ಗಬಹುದಾದರೂ ಹಣವನ್ನು ಬ್ಯಾಂಕಿಗೆ ಪಾವತಿ ಮಾಡುವ ಸಮಯದಲ್ಲಿ ಆರ್ಥಿಕ ಸಮತೋಲ ಕಾಯ್ದುಕೊಳ್ಳುವುದು ಅನಿವಾರ್ಯ ಎಂಬುದು ಮನವರಿಕೆಯಾಗುತ್ತದೆ.

ಇನ್ನು ಬೆಲೆ ಏರಿಕೆ. ಕಾರ್ಡಿನ ಯೋಜನೆಯಿಂದ ಬೆಲೆ ಏರಿಕೆ ಉಂಟಾಗಬೇಕಾದರೆ, ವ್ಯಾಪಾರಿಗಳು ತಮ್ಮೆಲ್ಲ ಸರ ಕನ್ನು ಕಾರ್ಡುದಾರರಿಗೆ ಮಾತ್ರ ಮಾರುವ ಪರಿಸ್ಥಿತಿ ಉಂಟಾಗಬೇಕಾಗುತ್ತದೆ. ವಾಸ್ತವವಾಗಿ ಇದು ಸಾಧ್ಯ ವಾಗುವುದಿಲ್ಲ. ಅಲ್ಲದೆ ಕಾರ್ಡುದಾರರಿಗೆ ಸರಕು ಮಾರಿದ ಮೇಲೆ ಶೀಘ್ರದಲ್ಲಿಯೇ ಬ್ಯಾಂಕಿನಿಂದ ವ್ಯಾಪಾರಿಗಳಿಗೆ ಪೂರ್ಣ ಹಣ ಪಾವತಿಯಾಗುವುದರಿಂದ ಅವರಿಗೆ ಇದು ಲಾಭದಾಯಕವಾಗಿಯೇ ಇರುತ್ತದೆ. ಹಾಗಿರುವಾಗ ಕಾರ್ಡು ದಾರರಿಗೆ ಅವರು ಹೆಚ್ಚಿನ ಬೆಲೆ ವಿಧಿಸಲು ಯಾವ ಕಾರಣವೂ ಉದ್ಭವಿಸುವುದಿಲ್ಲ.

ಇನ್ನು ಉದರಿ ಕಾರ್ಡಿನ ಯೋಜನೆಯ ಹಿನ್ನೆಲೆಯಲ್ಲಿ ಮುಂದೆ ಕಾಣಿಸಿರುವ ಕೆಲ ಅಂಶಗಳನ್ನು ವಿವರ ವಾಗಿ ಪರಿಶೀಲಿಸಬಹುದು: (i) ಗ್ರಾಹಕರ ಸ್ವರೂಪ, (ii) ಬ್ಯಾಂಕಿನ ಲಾಭಪ್ರದತೆ, (iii) ಭಾರತೀಯ ಪರಿಸರ ದಲ್ಲಿ ಇಂತಹ ಯೋಜನೆಯ ಉಪಯುಕ್ತತೆ.

### ಗ್ರಾಹಕರ ಸ್ವರೂಪ

ಅತಿ ಸಹಜವಾಗಿ ಬ್ಯಾಂಕು ಶ್ರೀಮಂತ ವರ್ಗದವರನ್ನು ತನ್ನ ಕಾರ್ಡುದಾರರಾಗಿ ಹೊಂದಬಯಸುತ್ತದೆ. ಈ ವರ್ಗದ ಕಾರ್ಡುದಾರರಿಂದ ಬ್ಯಾಂಕಿಗೆ ಹೆಚ್ಚು ನಷ್ಟವಾಗದೆಂಬುದೇ ಇದಕ್ಕೆ ಕಾರಣ. ಆದರೂ ಬ್ಯಾಂಕುಗಳು ಉತ್ತಮ ಮಾಸಿಕ ವರಮಾನವಿರುವ ಮಧ್ಯಮ ವರ್ಗ ಹಾಗೂ ಮೇಲ್ಮಧ್ಯಮ ವರ್ಗದವರನ್ನು ಕಾರ್ಡ್ ಯೋಜನೆಯ ತೆಕ್ಕೆಗೆ ಒಳಪಡಿಸಿ ಕೊಳ್ಳಲು ಹಿಂಜರಿಯುವುದಿಲ್ಲ. ಕೆಲವು ಕಡೆ ಈ ವರ್ಗದ ಕಾರ್ಡುದಾರರೇ ಶ್ರೀಮಂತರಿಗಿಂತ ಹೆಚ್ಚು ಸಂಖ್ಯೆಯಲ್ಲಿ ರುವುದು ಮತ್ತು ಹೆಚ್ಚು ಲಾಭದಾಯಕ ಗ್ರಾಹಕರಾಗಿರು ವುದು ಕಂಡುಬಂದಿದೆ.

ಇಂತಹ ವೈಯಕ್ತಿಕ ಕಾರ್ಡುದಾರರಲ್ಲದೆ, ಬ್ಯಾಂಕುಗಳು ಕಂಪನಿಗಳಿಗೆ ಕೂಡ ಉದರಿ ಕಾರ್ಡುಗಳನ್ನು ಕೊಡುವು ದುಂಟು. ಕಂಪನಿಯ ಉದರಿ ಕಾರ್ಡಿನ ವೈಶಿಷ್ಟ್ಯವೆಂದರೆ, ಮೊದಲೇ ಬ್ಯಾಂಕಿಗೆ ತಿಳಿಸಿದ ಕಂಪನಿಯ ನಿರ್ದೇಶಕರು, ಉದ್ಯಮಕ್ಕಾಗಿ ಪ್ರವಾಸ ಮಾಡುವ ಅಧಿಕಾರಿಗಳು ಮುಂತಾದವರು ಮತ್ತು ಯಾರು ಬೇಕಾದರೂ ಇದನ್ನು ಉಪಯೋಗಿಸಬಹುದು.

ಕಂಪನಿಯವರು ತಮ್ಮ ಅಧಿಕಾರಿಗಳ ಪ್ರವಾಸಕ್ಕಾಗಿ ಮುಂಗಡ ಹಣದ ಏರ್ಪಾಡು ಮಾಡಬೇಕಾಗಿರುವುದಿಲ್ಲ.

ಇದರಿಂದ ಕಂಪನಿಯ ಅಧಿಕಾರಿಗಳು ಹಣವನ್ನು ಎಲ್ಲೆಡೆ ತೆಗೆದುಕೊಂಡು ಹೋಗುವ ಆವಶ್ಯಕತೆ ಇರುವುದಿಲ್ಲ. ಪ್ರವಾಸಿ ಚೆಕ್ಕುಗಳನ್ನು ತಂದು ಅವನ್ನು ಮುರಿಸಲು ಬ್ಯಾಂಕಿಗೆ ಹೋಗಬೇಕಾಗಿರುವುದಿಲ್ಲ. ಅದ್ದರಿಂದ ತಮ್ಮ ಅಮೂಲ್ಯ ವೇಳೆಯನ್ನು ಅವರು ತಮ್ಮ ಕಾರ್ಯದಲ್ಲಿ ತೊಡಗಿಸಿಕೊಳ್ಳಬಹುದು.

ಅಲ್ಲದೆ ಆದ ಖರ್ಚು ವೆಚ್ಚಗಳ ನಿಖರವಾದ ಚಿತ್ರ ದೊರೆಯುತ್ತದೆ.

ಇಲ್ಲಿ ಕೂಡ ಅಲ್ಲೊಬ್ಬ ಇಲ್ಲೊಬ್ಬರು ಹೇಗಿದ್ದರೂ ಕಂಪ ನಿಯ ಉದರಿ ಕಾರ್ಡಿದೆ ಎಂದು ಸ್ವಲ್ಪ ಹೆಚ್ಚಿಗೆ ಖರ್ಚು ಮಾಡಬಹುದು. ಆದರೆ ಖರ್ಚಿನ ಪ್ರತಿ ವಿವರವೂ ಕಂಪನಿಗೆ ಬ್ಯಾಂಕಿನಿಂದ ತಲಪುತ್ತದೆ ಎಂಬುದೇ ಸಾಕಷ್ಟು ಮಂದಿಯನ್ನು ಮಿತವ್ಯಯಿಗಳಾಗಿ, ಇಲ್ಲವಾದರೆ ಕೊನೆಯ ಪಕ್ಷ ದುಂದುವ್ಯಯ ಮಾಡದವರಾಗಿ ಇರುವಂತೆ ನಿಯಂತ್ರಿ ಸುತ್ತದೆ.

### ಬ್ಯಾಂಕಿನ ಲಾಭಪ್ರದತೆ

ಬ್ಯಾಂಕಿನ ಎಲ್ಲ ಯೋಜನೆಗಳ ಮೂಲ ಉದ್ದೇಶ ಲಾಭಗಳಿಕೆ. ಉದರಿ ಕಾರ್ಡು ಯೋಜನೆ ಅದಕ್ಕೆ ಹೊರತಲ್ಲ. ಉದರಿ ಕಾರ್ಡಿನಲ್ಲಿ ಬ್ಯಾಂಕು ಲಾಭ ಗಳಿಸುವುದು ಎರಡು ರೀತಿಯಲ್ಲಿ:

1 ವ್ಯಾಪಾರಿಗಳಿಂದ ಬರುವ ಸರಕಿನ ಪಟ್ಟಿಯ ಮೇಲೆ ವಟ್ಟ,

2 ಕಾರ್ಡುದಾರರು ತೆರುವ ಬಡ್ಡಿ.

ಬ್ಯಾಂಕು ಈ ವ್ಯವಸ್ಥೆಗಾಗಿ ಹೂಡಿರುವ ಹಣಕ್ಕಿಂತಲೂ ಈ ಎರಡೂ ಅಂಶಗಳ ಮೊತ್ತ ಅಧಿಕವಾದಾಗ ಮಾತ್ರ ಈ ವ್ಯವಸ್ಥೆ ಲಾಭದಾಯಕ ಎನಿಸುತ್ತದೆ.

ಈ ವ್ಯವಸ್ಥೆಗಾಗಿ ಮುಖ್ಯವಾಗಿ ಬ್ಯಾಂಕು ಹೂಡ ಬೇಕಾದ ಬಂಡವಾಳವೆಂದರೆ:

1 ಎಲ್ಲ ವ್ಯಾಪಾರಿಗಳಿಗೂ ಏಕರೂಪದ ಯಂತ್ರ ವನ್ನೊದಗಿಸುವುದು,

2 ವ್ಯವಸ್ಥೆಯ ದೊಡ್ಡ ಜಾಲವನ್ನು ನಿರ್ವಹಿಸಲು ಕಂಪ್ಯೂಟರು ಮುಂತಾದ ಯಂತ್ರಸಜ್ಜಿತವಾಗುವುದು.

3 ಗ್ರಾಹಕರು ಕಾರ್ಡು ಕಳೆದುಕೊಂಡು ಬ್ಯಾಂಕಿಗೆ ಅದನ್ನು ತಿಳಿಸಿದ ಅನಂತರ ಆ ವಿಷಯವನ್ನು ತನ್ನ ಎಲ್ಲ ವ್ಯಾಪಾರಿ–ಸೇವಾ ಸಂಸ್ಥೆಗಳಿಗೆ ತಿಳಿಸುವ ಮುನ್ನ ಆ ಕಾರ್ಡಿನಿಂದ ಕೊಂಡಿರಬಹುದಾದ ಸರಕಿನ, ಸೇವೆಯ ಮೊತ್ತವನ್ನು ತುಂಬಿಕೊಡಬೇಕಾಗುವುದು.

ಇಷ್ಟೆಲ್ಲಾ ಇದ್ದರೂ ಪಾಶ್ಚಾತ್ಯ ದೇಶಗಳಲ್ಲಿ ಬ್ಯಾಂಕುಗಳು ಈ ಯೋಜನೆಯನ್ನು ಲಾಭದಾಯಕವಾಗಿ ನಡೆಸಿಕೊಂಡು ಬರುತ್ತಿವೆ ಎಂದು ತಿಳಿದುಬರುತ್ತದೆ.

ಬರಿಯ ಬ್ಯಾಂಕುಗಳೇಕೆ, ಕೆಲ ಬ್ಯಾಂಕೇತರ ಸಂಸ್ಥೆಗಳೂ ಇಂಥ ಯೋಜನೆಗಳನ್ನು ಪಾಶ್ಚಾತ್ಯ ದೇಶಗಳಲ್ಲಿ ರೂಪಿಸಿ ನಡೆಸುತ್ತಿವೆ. ಉದಾ: ಡೈನರ್ಸ್ ಕ್ಲಬ್.

ಹೀಗಿರುವಾಗ ಭಾರತದಲ್ಲಿ ಕೂಡ ಈ ಯೋಜನೆ ಯಶಸ್ವಿಯಾಗಬಹುದೆಂದು ಆಶಿಸಬಾರದೇಕೆ?

**ಭಾರತೀಯ ಪರಿಸರದಲ್ಲಿ**

ಭಾರತದಲ್ಲಿ ಉದರಿ ಕಾರ್ಡು ಎಂಬ ಪ್ಲಾಸ್ಟಿಕ್ ಹಣವನ್ನು ಈಗಾಗಲೇ ಕೆಲವು ಬ್ಯಾಂಕುಗಳು ಚಲಾವಣೆಗೆ ತಂದಿವೆ. ಸೆಂಟ್ರಲ್ ಬ್ಯಾಂಕ್, ವಿಜಯಾ ಬ್ಯಾಂಕ್, ಆಂಧ್ರ ಬ್ಯಾಂಕ್ ಇವು ವಿದೇಶಿ ಸಹಯೋಗದೊಡನೆ ಉದರಿ ಕಾರ್ಡುಗಳನ್ನು ಹೊರತಂದಿವೆ.

ಆದರೆ ಭಾರತೀಯ ಪರಿಸರದಲ್ಲಿ ಉದರಿ ಕಾರ್ಡು ಚಲಾವಣೆಗೆ ನಾನಾ ಬಗೆಯ ಅಡಚಣೆಗಳಿವೆ. ಅವುಗಳಲ್ಲಿ ಮುಖ್ಯವಾದವೆಂದರೆ:

1 ಭಾರತೀಯ ಬ್ಯಾಂಕುಗಳು ತನ್ನ ಗ್ರಾಹಕರಿಗೆ ವೈಯಕ್ತಿಕವಾಗಿ ಹೆಚ್ಚಿನ ಪ್ರಮಾಣದಲ್ಲಿ ಸಾಲ ನೀಡುತ್ತಿಲ್ಲ. ಕಾರ್ಡುಗಳ ಪ್ರವೇಶದಿಂದ ಇದನ್ನು ಹಿಗ್ಗಿಸಬೇಕಾಗುತ್ತದೆ. ಇದನ್ನು ತಕ್ಷಣ ಪೂರೈಸಲಾಗುವುದಿಲ್ಲ. ಹೀಗೆ ಮಾಡಿದರೂ ಇದರಿಂದ ಆದ್ಯತಾ ಕ್ಷೇತ್ರಗಳಿಗೆ ಹಣ ಪೂರೈಕೆ ಕಡಿಮೆಯಾಗುತ್ತದೆ.

2 ಭಾರತೀಯರ ಆದಾಯದಲ್ಲಿ ಬಹುಪಾಲು ಜೀವನಾವಶ್ಯಕ ವಸ್ತುಗಳನ್ನು ಕೊಳ್ಳುವುದಕ್ಕೇ ಸಾಲದಿರುವಾಗ ಹೆಚ್ಚಿನ ಜನಕ್ಕೆ ಉದರಿ ಕಾರ್ಡು ಉಪಯುಕ್ತವಾಗಲಾರದು.

3 ಭಾರತೀಯ ಬ್ಯಾಂಕುಗಳಲ್ಲಿ ಇಂಥ ಸಂಕೀರ್ಣ ವ್ಯವಸ್ಥೆಯನ್ನು ದಕ್ಷತೆಯಿಂದ ನಿರ್ವಹಿಸಲು ಬೇಕಾದ ಕಂಪ್ಯೂಟರ್ ಮೊದಲಾದ ಯಂತ್ರಸಲಕರಣೆಗಳಿಲ್ಲ. ಅವು ಕೇವಲ ಮಾನವ ಶಕ್ತಿಯನ್ನೇ ಅವಲಂಬಿಸಿರುವುದರಿಂದ ಈ ಯೋಜನೆ ಹೆಚ್ಚು ಲಾಭದಾಯಕವಾಗದು.

ಆದರೆ ಈ ಅಡಚಣೆಗಳು ನಮ್ಮನ್ನು ನಿರಾಶೆಗೆ ತಳ್ಳಬೇಕಾದ್ದಿಲ್ಲ. ಯೋಜನೆ ಯಶಸ್ವಿಯಾಗಬಹುದೆಂಬ ವಿಶ್ವಾಸವನ್ನು ಮೂಡಿಸುವ ಅಂಶಗಳು ಇವು:

1 ದೇಶಾದ್ಯಂತ ಶಾಖೆಗಳಿರುವ ಬ್ಯಾಂಕುಗಳು ಇಂಥ ಯೋಜನೆಯನ್ನು ರೂಪಿಸಿದರೆ ವಿಸ್ತಾರವಾದ ಮಾರುಕಟ್ಟೆ ದೊರೆಯುವುದರಿಂದ ಯೋಜನೆ ಲಾಭದಾಯಕವಾಗಿ ಪರಿಣಮಿಸಬಹುದು.

2 ಚೆಕ್ಕುಗಳ, ಪ್ರವಾಸಿ ಚೆಕ್ಕುಗಳ ಪರಿಮಿತಿಯನ್ನು ದಾಟಿ ಈ ಯೋಜನೆ ಹೆಚ್ಚಿನ ಸೌಲಭ್ಯವನ್ನೊದಗಿಸುತ್ತದೆ.

3 ಚೆಕ್ಕುಗಳು ಮತ್ತು ಪ್ರವಾಸಿ ಚೆಕ್ಕುಗಳಿಗೆ ಪೂರಕವಾಗಿ, ಹಣದ ಚಲಾವಣೆಯನ್ನು ಕಡಿಮೆ ಮಾಡುತ್ತದೆ.

4 ಈ ಯೋಜನೆಯ ಒಳಗಿನ ವ್ಯವಹಾರಗಳು ದಾಖಲಾಗುವುದರಿಂದ ತೆರಿಗೆಯಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಭಾರತದಲ್ಲಿ ಮಾನವ ಶಕ್ತಿ ಸಂಪನ್ಮೂಲ ವಿಪುಲವಾಗಿದ್ದು, ಪಾಶ್ಚಾತ್ಯದೇಶಗಳಲ್ಲಿ ದೊರಕುವುದಕ್ಕಿಂತ ಸುಲಭವಾಗಿ ದೊರೆಯುವುದರಿಂದ, ಹಾಗೂ ಈ ಸೇವೆಗೆ ಭಾರತೀಯ ಬ್ಯಾಂಕುಗಳು ಯಂತ್ರಸಜ್ಜಿತವಾಗುತ್ತಿರುವುದರಿಂದ ಉದರಿ ಕಾರ್ಡ್ ಯೋಜನೆ ಭಾರತದಲ್ಲಿ ಯಶಸ್ವಿಯಾಗಬಹುದೆಂದು ನಿರೀಕ್ಷಿಸಬಹುದು.

5 ಭಾರತೀಯ ಬ್ಯಾಂಕುಗಳು ತಮ್ಮ ಒಟ್ಟು ಮುಂಗಡದ ಕೆಲ ಭಾಗವನ್ನಾದರೂ ಉದರಿ ಕಾರ್ಡ್ ಯೋಜನೆಗೆ ವಿನಿಯೋಗಿಸುವ ಸಾಧ್ಯತೆಗಳು ಖಂಡಿತ ಇವೆ.

6 ಭಾರತೀಯ ಮಧ್ಯಮ ಹಾಗೂ ಮೇಲ್ಮಧ್ಯಮ ವರ್ಗಗಳವರಿಗೆ ಇದೊಂದು ಅನುಕೂಲಕರ ಸಾಧನವಾಗಬಹುದು.

ಒಟ್ಟಾರೆ ಭಾರತದಲ್ಲಿ ಈಗ ಈ ಪ್ಲಾಸ್ಟಿಕ್ ಹಣ ಪರೀಕ್ಷೆಗೆ ಒಳಗಾಗಿದೆ. ಅದು ಈ ಪರೀಕ್ಷೆಯಲ್ಲಿ ಗೆದ್ದರೆ ಕಾಗದದ ಹಣದ ಮೇಲೂ ಜಯ ಗಳಿಸುತ್ತದೆಯೇ ಎಂಬುದು ಕುತೂಹಲದ ವಿಷಯ. ಇದರ ತೀರ್ಮಾನಕ್ಕಾಗಿ ಇನ್ನೂ ಕೊಂಚ ಕಾಲ ಕಾಯಲೇಬೇಕು.



# ಸಮಾಜವಾದಿ ವ್ಯವಸ್ಥೆಯಲ್ಲಿ ಬ್ಯಾಂಕುಗಳು

ಮೂಲ : ವಾಡಿಮ್ ಟ್ಕ್ಯಾಚ್
ಅನುವಾದ : ಕ. ನ. ಜಯರಾಮು

ಸಮಾಜವಾದಿ ವ್ಯವಸ್ಥೆಯಲ್ಲಿ ಹಣ ತನ್ನ ಎಲ್ಲ ಕಾರ್ಯ ಭಾರಗಳನ್ನು ಉಳಿಸಿಕೊಂಡಿರುತ್ತದೆ. ಉದಾಹರಣೆಗೆ ಸೋವಿಯತ್ ದೇಶದ ರೂಬೆಲ್ಲನ್ನು ಉದ್ಯಮಗಳು ತಮ್ಮ ನಡುವಣ ವಹಿವಾಟುಗಳ ಪರಸ್ಪರ ಇತ್ಯರ್ಥಕ್ಕಾಗಿ ಉಪ ಯೋಗಿಸುತ್ತವೆ. ಅದು ಉದರಿ ಹಾಗೂ ಪಾವತಿಯ ಸಾಧನವೂ ಆಗಿದೆ. ಸಂಪತ್ತು ರೂಬೆಲ್ಲಗಳ ರೂಪ ದಲ್ಲಿ ಸಂಚಯಗೊಳ್ಳುತ್ತದೆ. ಬ್ಯಾಂಕುಗಳ ಮೂಲಕ ಹಣದ ಕಲಾಪಗಳನ್ನು ನಡೆಸಲಾಗುತ್ತದೆ.

ಸಮಾಜವಾದಿ ದೇಶಗಳಲ್ಲಿ ಎಲ್ಲ ಬ್ಯಾಂಕುಗಳೂ ರಾಷ್ಟ್ರೀ ಕೃತವಾಗಿರುತ್ತವೆ. ಇದರಿಂದಾಗಿ ಅಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲೂ ಸರಕಾರದ ಏಕಸ್ವಾಮ್ಯವನ್ನು ಸ್ಥಾಪಿಸುವುದು ಸಾಧ್ಯವಾಗಿದೆ. ಅಲ್ಲದೆ ಸರಕಾರಿ ಮತ್ತು ಸಹಕಾರಿ ಉದ್ಯಮ ಗಳೂ ಸಂಸ್ಥೆಗಳೂ ತಮ್ಮ ಎಲ್ಲ ಹಣವನ್ನೂ ಬ್ಯಾಂಕು ಖಾತೆಗಳಲ್ಲೇ ಇಡಬೇಕು.

ಸೋವಿಯತ್ ದೇಶದಲ್ಲಿ ಸರಕಾರ, ಸಹಕಾರಿ ಮತ್ತು ಸರ್ಕಾರಿ ವಲಯ ಉದ್ಯಮಗಳು ಮತ್ತು ಸಂಸ್ಥೆಗಳ ನಡುವಣ ಯಾವುದೇ ವ್ಯವಹಾರವಾಗಲಿ ಬ್ಯಾಂಕುಗಳ ನೆರವಿನಿಂದ ನಿಯಮಿತಗೊಳಿಸಲಾಗುತ್ತದೆ. ಉದಾ ಹರಣೆಗೆ ಒಂದು ಸಾಮೂಹಿಕ ಕೃಷಿ ಕ್ಷೇತ್ರ (ಕಲೆಕ್ಟಿವ್ ಫಾರ್ಮ್) ಲೋಹ ಕತ್ತರಿಸುವ ಯಂತ್ರ ಗಳನ್ನು ಕೊಳ್ಳಲು ತೀರ್ಮಾನಿಸಿದ ಪಕ್ಷದಲ್ಲಿ ಅದು ಕಾರ್ಖಾನೆ ಯೊಂದರೊಡನೆ ಕರಾರೊಂದಕ್ಕೆ ಸಹಿ ಹಾಕುತ್ತದೆ. ಮತ್ತು ಆ ಆದೇಶದ (ಆರ್ಡರ್) ಬಾಬ್ತು ಹಣವನ್ನು ಆ ಸಾಮೂ ಹಿಕ ಕೃಷಿ ಕ್ಷೇತ್ರದ ಖಾತೆಯಿಂದ ಯಂತ್ರ ಸರಬರಾಜುದಾರ ಸಂಸ್ಥೆಯ ಖಾತೆಗೆ ಬ್ಯಾಂಕಿನ ಆ ಸ್ಥಳದ ವಿಭಾಗ ಕಛೇರಿ ವರ್ಗಾಯಿಸುತ್ತದೆ.

ಸೋವಿಯತ್ ದೇಶದಲ್ಲಿ ಉದ್ಯಮಗಳ ಹಾಗೂ ಸಂಸ್ಥೆಗಳ ನಡುವಣ ವಹಿವಾಟುಗಳಿಗೆ ಅಗತ್ಯವಾದ ಹಣ ಪೂರೈಕೆ ವರ್ಗಾವಣೆಗಳಿಂದ ಮಾತ್ರವಲ್ಲದೆ ಉದರಿ ಸಾಲ ಸೌಲಭ್ಯದಿಂದಲೂ ಆಗುತ್ತದೆ. ಸೋವಿಯತ್ ಕೈಗಾರಿಕೆ ಗಳ ಪ್ರಚಲಿತ ಧನದ ಸೇಕಡ 50ರಷ್ಟು ಬ್ಯಾಂಕಿನ ಉದರಿ ಗಳ ರೂಪದಲ್ಲೇ ಇರುತ್ತದೆ. ಕೃಷಿಗೆ ಸಂಬಂಧಿಸಿದಂತೆ ಇದು ಇನ್ನೂ ಅಧಿಕ. ಸೋವಿಯತ್ ದೇಶದಲ್ಲಿ ಬ್ಯಾಂಕ್ ಉದರಿಗಳು ಮಾತ್ರ ಲಭ್ಯವಿವೆ. ವಾಣಿಜ್ಯಕ ಉದರಿ, ಹುಂಡಿಗಳು ಮತ್ತು ಇತರ ಸಂಲೇಖಗಳನ್ನು 1929ರಷ್ಟು ಹಿಂದೆಯೇ ರದ್ದುಪಡಿಸಲಾಯಿತು. ಉದ್ಯಮಗಳ ನಡುವಣ ನೇರ ವಹಿವಾಟುಗಳನ್ನು ಅನಧಿಕೃತವಾಗಿ ಧನಿಸುವುದು, ದಾಖಲಿಸುವುದು, ಸೋವಿಯೆತ್ ದೇಶದ ಯೋಜನಾ ಧಾರಿತ ವ್ಯವಸ್ಥೆಗೆ ವಿರೋಧವಾಗುತ್ತದೆ. ಮತ್ತು ಅದು ಬ್ಯಾಂಕಿಂಗಿನಲ್ಲಿ ಸರಕಾರ ಹೊಂದಿರುವ ಏಕಸ್ವಾಮ್ಯದ ಉಲ್ಲಂಘನೆಯಾಗುತ್ತದೆ.

ಯೋಜನೆಯಲ್ಲಿ ನಿರೂಪಿಸಲಾದ ಮತ್ತು ಯೋಜನೆಯ ಸಾಫಲ್ಯಕ್ಕೆ ಅನುಗುಣವಾದ ಕಲಾಪಗಳಿಗೆ ಮಾತ್ರ ಬ್ಯಾಂಕು ಉದರಿಗಳನ್ನು ನೀಡುತ್ತದೆ. ಅಸಮರ್ಥ ಉದ್ಯಮ ಗಳಿಗೆ ಕಠಿಣ ಷರತ್ತುಗಳ ಮೇಲೆ ಉದರಿಗಳು ದೊರಕುತ್ತವೆ. ಕೈಗಾರಿಕಾ ಉದ್ಯಮಗಳು ಉದರಿಗಳ ಮೇಲೆ ಸಾಮಾನ್ಯವಾಗಿ ವರ್ಷಕ್ಕೆ ಸೇಕಡ 6ರಂತೆ ಬಡ್ಡಿ ಪಾವತಿ ಮಾಡುತ್ತವೆ. ಅವು ತಮ್ಮ ಯೋಜನೆಗಳನ್ನು ಅಥವಾ ಕಾಲಬದ್ಧ ಕಾರ್ಯಕ್ರಮಗಳನ್ನು ಪೂರೈಸದಿದ್ದರೆ ಅಥವಾ ಬೇಡಿಕೆ ಇಲ್ಲದ ಸರಕುಗಳನ್ನು ಉತ್ಪಾದಿಸಿದರೆ, ಆಗ 8% ಅಥವಾ 10% ಬಡ್ಡಿ ತೆರಬೇಕಾಗುವುದು.

ವಾಣಿಜ್ಯ ದಳ್ಳಾಳಿಗಳಾಗಿಯೂ ಕೈಗಾರಿಕೆ ಮತ್ತು ಕೃಷಿ ಗಳ ಸಾಲಿಗ ಸಂಸ್ಥೆಗಳಾಗಿಯೂ ಸೋವಿಯತ್ ಬ್ಯಾಂಕು ಗಳು ರಾಷ್ಟ್ರೀಯ ಆರ್ಥಿಕ ಚಟುವಟಿಕೆಯ ಎಲ್ಲ ಮುಖ ಗಳನ್ನೂ ನಿಯಂತ್ರಿಸಬಲ್ಲ ಎಲ್ಲ ಸಾಮರ್ಥ್ಯವನ್ನೂ ಪಡೆದಿವೆ.

ಸೋವಿಯತ್ ಬ್ಯಾಂಕಿಂಗ್ ವ್ಯವಸ್ಥೆಯ ಮುಖ್ಯ ಅಂಗ ವೆಂದರೆ ಸೋವಿಯೆತ್ ಒಕ್ಕೂಟದ ಸ್ಟೇಟ್ ಬ್ಯಾಂಕ್. ಇದು ನೋಟು ನೀಡಿಕೆಯ, ಹಣ ವಸೂಲಿಯ, ಜಮಾದಾಖ ಲೆಯ ಹಾಗೂ ಲೆಕ್ಕಗಳ ಇತ್ಯರ್ಥದ ರಾಷ್ಟ್ರೀಯ ಕೇಂದ್ರ ವಾಗಿ ಕಾರ್ಯ ನಿರ್ವಹಿಸುತ್ತದೆ. ಇದು ಪ್ರಪಂಚದ ಅತ್ಯಂತ ದೊಡ್ಡ ಬ್ಯಾಂಕಿಂಗ್ ವ್ಯವಸ್ಥೆ. 4,374 ಗಣರಾಜ್ಯಕ ಹಾಗೂ

ಪ್ರಾದೇಶಿಕ ವಿಭಾಗಗಳನ್ನೂ, ಸ್ಥಳೀಯ ಕಛೇರಿಗಳನ್ನೂ ಅಧಿಕರಣಗಳನ್ನೂ ಅಲ್ಲದೆ ಸುಮಾರು 80,000 ಉಳಿತಾಯ ಬ್ಯಾಂಕುಗಳನ್ನೂ ಸೋವಿಯತ್ ಒಕ್ಕೂಟದ ಸ್ಟೇಟ್ ಬ್ಯಾಂಕ್ ಒಗ್ಗೂಡಿಸುತ್ತದೆ. ಅದು ಸುಮಾರು 40 ಲಕ್ಷ ಖಾತೆಗಳನ್ನು ಹೊಂದಿರುವ 6 ಲಕ್ಷ ಗ್ರಾಹಕರಿಗೆ ಸೇವೆ ಸಲ್ಲಿಸುತ್ತದೆ; 3,50,000 ಕ್ಕೂ ಹೆಚ್ಚು ಸಂಖ್ಯೆಯ ನುರಿತ ಉದ್ಯೋಗಿಗಳಿಗೆ ನೌಕರಿ ನೀಡಿದೆ.

ಸೋವಿಯತ್ ಒಕ್ಕೂಟದಲ್ಲಿ ಇನ್ನೂ ಹಲವು ಬ್ಯಾಂಕಿಂಗ್ ಸಂಸ್ಥೆಗಳಿವೆ.

ಬಂಡವಾಳ ನಿರ್ಮಾಣಕ್ಕೆ ಅಗತ್ಯವಾದ ಧನಪೋಷಣೆಯ ಕಾರ್ಯವನ್ನು ಬಹುತೇಕ ಅಖಿಲ ಒಕ್ಕೂಟ ವಿನಿಯೋಜನ ಹಣಕಾಸು ಪೂರೈಕೆ ಬ್ಯಾಂಕ್ (ಆಲ್-ಯೂನಿಯನ್ ಬ್ಯಾಂಕ್ ಫಾರ್ ಇನ್‌ವೆಸ್ಟ್‌ಮೆಂಟ್ ಫೈನಾನ್ಸಿಂಗ್ : ಸ್ಟ್ರೋಯಿ ಬ್ಯಾಂಕ್) ನಿರ್ವಹಿಸುತ್ತದೆ. ಕೃಷಿ, ಅರಣ್ಯಗಾರಿಕೆ ಮತ್ತು ಜಲ ನಿರ್ವಹಣೆಯನ್ನುಳಿದು ಇತರ ಎಲ್ಲ ಆರ್ಥಿಕ ವಲಯಗಳಿಗೆ ಇದು ಸೇವೆ ಸಲ್ಲಿಸುತ್ತದೆ. ಸೋವಿಯತ್ ಒಕ್ಕೂಟದ ವಿದೇಶಿ ವ್ಯಾಪಾರ ವಹಿವಾಟುಗಳನ್ನು ಸೋವಿಯತ್ ಒಕ್ಕೂಟದ ವಿದೇಶಿ ವ್ಯಾಪಾರ ಬ್ಯಾಂಕ್ (ಯು.ಎಸ್.ಎಸ್.ಆರ್. ಬ್ಯಾಂಕ್ ಫಾರ್ ಫಾರಿನ್ ಟ್ರೇಡ್: ವ್ನೆಸ್ಟೋರ್ಗ್ ಬ್ಯಾಂಕ್) ನಿರ್ವಹಿಸುತ್ತದೆ. ಇದು ಕೂಡು ಬಂಡವಾಳ ಸಂಘ. ಇದರ ಸ್ಟಾಕ್‌ದಾರರ ಪೈಕಿ ಒಕ್ಕೂಟ ಸ್ಟೇಟ್ ಬ್ಯಾಂಕ್, ಸೋವಿಯತ್ ಒಕ್ಕೂಟದ ವಿದೇಶಿ ವ್ಯಾಪಾರ ಮಂತ್ರಾಲಯ, ಸೆಂಟ್ರೋಸೊಯೂಜ್ ಸಹಕಾರಿ ಸಂಸ್ಥೆಗಳ ಸಂಘ ಮತ್ತು ಅನೇಕ ವಿದೇಶಿ ವ್ಯಾಪಾರ ಸಂಘಗಳಿವೆ. ವ್ನೆಸ್ಟೋರ್ಗ್ ಬ್ಯಾಂಕು ಪ್ರಪಂಚದ ಅತ್ಯಂತ ದೊಡ್ಡ ಬ್ಯಾಂಕುಗಳಲ್ಲಿ ಒಂದು. ಇದರ ಸ್ಟಾಕ್ ಮತ್ತು ಮೀಸಲು ಬಂಡವಾಳ 60 ಕೋಟಿ ರೂಬೆಲ್ಲುಗಳಷ್ಟಾಗುತ್ತದೆ.

ಈಗೀಗ ವ್ನೆಸ್ಟೋರ್ಗ್ ಬ್ಯಾಂಕ್ 110 ದೇಶಗಳಲ್ಲಿಯ 1,619 ಬ್ಯಾಂಕುಗಳೊಂದಿಗೆ ಸಂವಾದಿ (ಕರೆಸ್ಪಾಂಡಿಂಗ್) ಸಂಬಂಧವನ್ನಿಟ್ಟುಕೊಂಡಿದೆ. 1971ರಲ್ಲಿ ಇದು 1,371 ಬ್ಯಾಂಕುಗಳೊಂದಿಗೆ ಮಾತ್ರ ಈ ಬಗೆಯ ಸಂಬಂಧ ಹೊಂದಿತ್ತು. ಸೋವಿಯತ್ ಒಕ್ಕೂಟದ ಹತ್ತು ಸ್ವತಂತ್ರ ಬ್ಯಾಂಕುಗಳು ಮತ್ತು ಬ್ಯಾಂಕ್ ವಿಭಾಗಗಳು ಒಂಬತ್ತು ಬಂಡವಾಳವಾದಿ ದೇಶಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಮಾಸ್ಕೋದಲ್ಲಿ ಇಪ್ಪತ್ತಕ್ಕೂ ಮಿಕ್ಕು ವಿದೇಶಿ ಬ್ಯಾಂಕುಗಳ ಕಛೇರಿಗಳಿವೆ.

ವ್ನೆಸ್ಟೋರ್ಗ್ ಬ್ಯಾಂಕು ಸೋವಿಯೆತ್ ವಿದೇಶಿ ವ್ಯಾಪಾರಕ್ಕೆ ಉದರಿ ಸೌಲಭ್ಯ ನೀಡಿ ಧನ ಒದಗಿಸುವುದಲ್ಲದೆ, ಸರಕು ಮತ್ತು ಸೇವೆಗಳ ಆಮದು ರಫ್ತು ವ್ಯವಹಾರಗಳಿಗೆ ಸಂಬಂಧಿಸಿದ ಹಣ ಇತ್ಯರ್ಥ ಕಾರ್ಯ ಕೈಗೊಳ್ಳುತ್ತದೆ. ಮತ್ತು ಹೊರ ದೇಶಗಳಿಗೆ ಪಾವತಿಗಳನ್ನೂ ಹೊರ ದೇಶಗಳಿಂದ ಸ್ವೀಕರಿಸಲಾಗುವ ಪಾವತಿಗಳನ್ನೂ ಇತ್ಯರ್ಥಗೊಳಿಸುತ್ತದೆ; ವಿದೇಶಿ ವಿನಿಮಯ ಕಲಾಪಗಳನ್ನೂ ನಡೆಸುತ್ತದೆ.

### ಬ್ಯಾಂಕ್ ಮತ್ತು ಜನಸಾಮಾನ್ಯರ ಸಂಬಂಧ

ಸೋವಿಯತ್ ಪ್ರಜೆಗಳು ತಮ್ಮ ಹಣವನ್ನು ಉಳಿತಾಯ ಬ್ಯಾಂಕಿನಲ್ಲಿಡಬಹುದು. 1978ರ ಅಂಕಿ ಅಂಶಗಳ ಪ್ರಕಾರ ಕೆಲವು ದಶಲಕ್ಷ ಮಂದಿ ಆ ರೀತಿ ಖಾತೆಗಳನ್ನು ಹೊಂದಿದ್ದರು. ಅವರ ಒಟ್ಟು ಠೇವಣಿ ಮೊಬಲಗು 13,100 ಕೋಟಿ ರೂಬೆಲ್. ಸೋವಿಯತ್ ಬ್ಯಾಂಕು ವಾರ್ಷಿಕವಾಗಿ ಸಾವಧಿ ಠೇವಣಿಗಳ ಮೇಲೆ 3% ಮತ್ತು ಬೇಡಿಕೆ ಠೇವಣಿಗಳ ಮೇಲೆ 2% ಬಡ್ಡಿ ಕೊಡುತ್ತದೆ. ಪ್ರತಿ ವರ್ಷವೂ ಸೋವಿಯತ್ ಜನರ ಒಟ್ಟು ಠೇವಣಿ ಮೊಬಲಗು 300 ಕೋಟಿ ರೂಬೆಲ್ಲುಗಳಷ್ಟು ಅಧಿಕವಾಗುತ್ತದೆ. ಸೋವಿಯತ್ ಪ್ರಜೆಗಳು ಇಚ್ಛಿಸಿದಲ್ಲಿ ತಮ್ಮ ವೇತನಗಳನ್ನೂ ಉಳಿತಾಯ ಖಾತೆಗಳ ಮೂಲಕ ಪಡೆಯಬಹುದು ಮತ್ತು ಬಾಡಿಗೆ ಮತ್ತು ತೆರಿಗೆಗಳನ್ನು ಅದರ ಮೂಲಕ ಪಾವತಿ ಮಾಡಬಹುದು. ಈ ವ್ಯವಸ್ಥೆಯಿಂದ ಎಷ್ಟೋ ಸಮಯದ ಉಳಿತಾಯ ಸಾಧ್ಯವಾಗುತ್ತದೆ.

ಸೋವಿಯತ್ ಪ್ರಜೆಗಳು ಬ್ಯಾಂಕಿನಿಂದ ಉದರಿಯನ್ನು ಪಡೆಯಬಹುದು. ಬಹುತೇಕ ಈ ಉದರಿ ದೊರಕುವುದು ಮನೆ ಅಥವಾ ಸಹಕಾರಿ ಅಟ್ಟಗಳನ್ನು (ಫ್ಲಾಟ್: ವಾಸಕಕ್ಷೆ) ಕಟ್ಟುವುದಕ್ಕೆ. ಪಟ್ಟಣಗಳಲ್ಲಿ ಮನೆ ಕಟ್ಟುವವರು ವರ್ಷಕ್ಕೆ 2% ಬಡ್ಡಿ ದರದ ಮೇಲೆ ಬ್ಯಾಂಕು ಸಾಲ ಪಡೆಯುತ್ತಾರೆ. ಆದರೆ ಅವರಿಗೆ ನಿವೇಶನವಿರಬೇಕು ಮತ್ತು ಮನೆ ಕಟ್ಟಲು ಅಗತ್ಯವಾದ ಹಣದಲ್ಲಿ ಸೇ. 50ರಷ್ಟು ಅವರಲ್ಲಿರಬೇಕು. ವೈದ್ಯರು,ಉಪಾಧ್ಯಾಯರು, ಯುದ್ಧಸಂತ್ರಸ್ತರು ಮತ್ತು ಇತರ ಕೆಲವು ವರ್ಗಗಳವರು ಬ್ಯಾಂಕ್ ಉದರಿಯನ್ನು ಪಡೆಯುವ ವಿಚಾರದಲ್ಲಿ ಕೆಲವು ಸವಲತ್ತು ಪಡೆದಿರುತ್ತಾರೆ. ಉದಾಹರಣೆಗೆ ಹಳ್ಳಿಯ ಉಪಾಧ್ಯಾಯರು ತಮ್ಮ ಭಾವೀ ಮನೆ ಕಟ್ಟಲು ತಗಲುವ ಸೇ.100 ರಷ್ಟನ್ನೂ ಸಾಲವಾಗಿ ಪಡೆಯಬಹುದು. ಹೊಸ ವಲಸಿಗಳ ಮನೆ ನಿರ್ಮಾಣಕ್ಕೆ ಅಗತ್ಯವಾದ ಸಾಲದಲ್ಲಿ ಒಂದು ಭಾಗವನ್ನು ವಹಿಸಿಕೊಳ್ಳಲು ಗಣರಾಜ್ಯಗಳ ಸರಕಾರಗಳು ತಂತಮ್ಮ ಬಜೆಟ್ಟುಗಳಲ್ಲಿ ವ್ಯವಸ್ಥೆ ಮಾಡಿರುತ್ತವೆ. ಯುದ್ಧಸಂತ್ರಸ್ತರಿಗೆ ಬಡ್ಡಿಯೇ ಇಲ್ಲ.

ವಾಸಕಕ್ಷೆಗಳನ್ನು ನಿರ್ಮಿಸುವ ಸಂಘಗಳ ಸದಸ್ಯರಿಗೆ ಬ್ಯಾಂಕುಗಳು ದೊಡ್ಡ ಪ್ರಮಾಣದಲ್ಲಿ ಧನ ಸಹಾಯ ಮಾಡುತ್ತವೆ. ಅವರು ವಾಸಕಕ್ಷೆಯ ನಿರ್ಮಾಣ ವೆಚ್ಚದ ಸೇಕಡ 40ರಷ್ಟು ಹಣವನ್ನು ನಗದಾಗಿ ಪಾವತಿ ಮಾಡುತ್ತಾರೆ. ಉಳಿದ ಸೇಕಡ 60ನ್ನು ಸಾಲಿಯಾನ ಸೇಕಡ 0.5ರ ಬಡ್ಡಿ ದರದಲ್ಲಿ

10ರಿಂದ 15 ವರ್ಷಗಳ ಅವಧಿಗೆ ಬ್ಯಾಂಕು ಉದರಿ ನೀಡುತ್ತವೆ. ಗ್ರಾಮ ಪ್ರದೇಶದಲ್ಲಿ ಸಾಮೂಹಿಕ ಬೇಸಾಯಗಾರರು ತಮ್ಮ ಮನೆಯ ಒಟ್ಟು ನಿರ್ಮಾಣ ವೆಚ್ಚದ ಸೇಕಡ 90ರಷ್ಟು ಹಣವನ್ನು ಸಾಲವಾಗಿ ಪಡೆಯುತ್ತಾರೆ. ಆಮೇಲೆ ಈ ಸಾಲದ ಅರ್ಧ ಭಾಗವನ್ನು ರಾಜ್ಯ ಮತ್ತು ರಾಜ್ಯ ಸಾಮೂಹಿಕ ಕೃಷಿಕ್ಷೇತ್ರ (ಕಲೆಕ್ಟಿವ್ ಫಾರಂ) ನಿಧಿಗಳಿಂದ ವಾಪಸು ಮಾಡಲಾಗುವುದು.

ಸೋವಿಯತ್ ಒಕ್ಕೂಟದಲ್ಲಿ ಅನುಭೋಗಿ ಉದರಿ ಹೆಚ್ಚು ಹೆಚ್ಚು ಜನಪ್ರಿಯವಾಗುತ್ತಿದೆ. ದುಬಾರಿ ಬೆಲೆಯ ಪೀಠೋಪಕರಣಗಳು, ಶೀತಕಗಳು, ದೂರದರ್ಶನಗಳು ಮುಂತಾದ ಸ್ಥಾಯಿ ಸರಕುಗಳನ್ನು ಕೊಳ್ಳಲು ಜನರು ಸಾಮಾನ್ಯವಾಗಿ ಈ ಸೌಲಭ್ಯವನ್ನು ಬಳಸಿಕೊಳ್ಳುತ್ತಾರೆ. ಸಾಲದ ಮೇಲೆ ಸರಕನ್ನು ಕೊಳ್ಳುವಾಗ ಜನರು ಅದರ 20–25ರಷ್ಟನ್ನು ಮೊದಲು ಪಾವತಿ ಮಾಡಿ, ಉಳಿದುದನ್ನು ಸೇಕಡ 1ರಿಂದ 2 ರವರೆಗಿನ ಬಡ್ಡಿ ದರದ ಮೇಲೆ ಕಂತುಗಳಲ್ಲಿ ಪಾವತಿ ಮಾಡುತ್ತಾರೆ. ಈ ಉದ್ದೇಶಗಳಿಗಾಗಿ ಇಲಾಖಾ ಮಳಿಗೆಗಳು (ಡಿಪಾರ್ಟ್‌ಮೆಂಟ್ ಸ್ಟೋರ್ಸ್) ಸೋವಿಯತ್ ಒಕ್ಕೂಟದ ಸ್ಟೇಟ್ ಬ್ಯಾಂಕಿನ ಸ್ಥಳೀಯ ಕಛೇರಿಗಳಿಂದ ಉದರಿಗಳನ್ನು ಪಡೆಯುತ್ತವೆ.

---

# ಸೋವಿಯತ್ ಬ್ಯಾಂಕ್ ಉದರಿ ವ್ಯವಸ್ಥೆಯಲ್ಲಿ ಬದಲಾವಣೆಗಳು

---

ಮೂಲ: **ವ್ಯಾಚೆಸ್ಲಾವ್ ಕೋಸ್ಟಕೋವ್**
ಅನುವಾದ: **ಮಧುಕರ್ ವಿ. ನವರತ್ನ**

ಸೋವಿಯತ್ ರಷ್ಯದ ಅರ್ಥವ್ಯವಸ್ಥೆಯ ಬಗ್ಗೆ ಪಾಶ್ಚಾತ್ಯರಲ್ಲಿ ಬಹಳವಾಗಿ ಹರಡಿರುವ ತಪ್ಪು ತಿಳಿವಳಿಕೆ ಎಂದರೆ, ಅದರ ಸಮಾಜವಾದದಿಂದ ಹಣದ ನಿಯಂತ್ರಣ ಸಂಪೂರ್ಣವಾಗಿ ಅಲ್ಲದಿದ್ದರೂ ಬಹು ಮಟ್ಟಿಗೆ ದುರ್ಬಲಗೊಂಡಿದೆ ಎಂಬುದು. ಇಂತಹ ಆರೋಪಣೆಗಳ ಹಿಂದಿರುವ ಪ್ರಚಾರದ ಗುರಿ ಸ್ಪಷ್ಟವಾಗಿದೆ. ಪಾಶ್ಚಾತ್ಯ ಲೇಖಕರು ಸೋವಿಯತ್ ಅರ್ಥವ್ಯವಸ್ಥೆ ರಾಜಕೀಯ ಸ್ವಯಂಸಿದ್ಧಾಂತದಿಂದ ನಡೆಯುತ್ತದೆಯೇ ಹೊರತು ಸಹಜ ಆರ್ಥಿಕ ಕಟ್ಟುಪಾಡುಗಳಿಂದಲ್ಲ ಎಂಬುದನ್ನು ಸಿದ್ಧಪಡಿಸಲು ವಿಫಲ ಪ್ರಯತ್ನ ನಡಸಿದ್ದಾರೆ.

ಸೋವಿಯತ್ ಅರ್ಥ ವ್ಯವಸ್ಥೆಯಲ್ಲಿ ಉದರಿ ವ್ಯವಸ್ಥೆ ಕೆಲಸ ಮಾಡುವ ರೀತಿಯ ಬಗ್ಗೆ ನಿಮಗೆ ಸಾಮಾನ್ಯವಾದ ಒಂದು ಕಲ್ಪನೆ ಬಂದರೂ ಸಾಕು; ಮೇಲೆ ಹೇಳಿದ ಆರೋಪಗಳು ಖಂಡಿತವಾಗಿಯೂ ಅಸಂಗತವೆಂಬುದು ತಿಳಿಯುತ್ತದೆ. ಸೋವಿಯತ್ ಒಕ್ಕೂಟ ಬ್ಯಾಂಕ್ ವ್ಯವಹಾರವನ್ನು ಏಕಸ್ವಾಮ್ಯಗೊಳಿಸಿದ್ದರೂ ಹಣವನ್ನೇನೂ ಕಾನೂನು ಬಾಹಿರವೆಂದು ಗಣಿಸಿಲ್ಲ. ಹಣವನ್ನು ಜನರ ಹಿತಕ್ಕೋಸ್ಕರ ಉಪಯೋಗಿಸಲಾಗುತ್ತದೆ. ಇಂದು ಕೈಗಾರಿಕೆಯಲ್ಲಿ ವಿನಿಯೋಜಿತವಾಗಿರುವ ಪ್ರತಿ ಎರಡನೆಯ ರೂಬ್‌ಲ್ಲು ಒದಗಿರುವುದು ಉದರಿಯಿಂದ. ಕೃಷಿ ಮತ್ತು ವ್ಯಾಪಾರದಲ್ಲಿ ಉದರಿಯ ಪಾಲು ಇನ್ನೂ ಹೆಚ್ಚಿನದಾಗಿದೆ.

ವರ್ಷಕ್ಕೆ ಒಟ್ಟು ಉದರಿ ಮೊತ್ತ 300 ಶತಕೋಟಿ ರೂಬ್‌ಲ್‌ಗಳಷ್ಟು (ಒಂದು ರೂಬ್‌ಲ್ = 1.6 ಡಾಲರ್). ಸೋವಿಯತ್ ಬ್ಯಾಂಕುಗಳು ನಡಸುವ ಕಾರ್ಯಾಚರಣೆಯ ಗಾತ್ರ ಇದರಿಂದ ವೇದ್ಯವಾಗುತ್ತದೆ. ಈಗ ಕಳೆದ ದಶಕದಲ್ಲಿ ಅಲ್ಪಾವಧಿ ಸಾಲಗಳ ಪರಿಮಾಣ ಸುಮಾರು ಸೇ. 60ರಷ್ಟು ಹೆಚ್ಚಿದೆ; ಅಥವಾ ವರ್ಷಕ್ಕೆ 6%ರಂತೆ ಅಧಿಕವಾಗಿದೆ. ಸೋವಿಯತ್ ದೇಶದ ಅರ್ಥವ್ಯವಸ್ಥೆ ಆರೋಗ್ಯವಾಗಿದೆಯೆಂಬುದಕ್ಕೆ ಇದೇ ಸಾಕ್ಷಿ.

ಸೋವಿಯತ್ ದೇಶದ ರಾಷ್ಟ್ರೀಯ ವರಮಾನ ಸತತವಾಗಿ ಬೆಳೆಯುತ್ತಿದೆ. 1976-79 ರಲ್ಲಿ ಅದು ಹಿಂದಿನ ಪಂಚವಾರ್ಷಿಕ ಯೋಜನೆಯ ಮಟ್ಟಕ್ಕಿಂತ 323 ಶತಕೋಟಿ ರೂಬ್‌ಲ್‌ಗಳಷ್ಟು ಅಧಿಕವಾಗಿತ್ತು. ಇದು ಸೋವಿಯತ್ ಬ್ಯಾಂಕುಗಳ ತೀವ್ರ ವಿನಿಯೋಜನೆ ನೀತಿಗೆ ತಳಹದಿಯಾಗಿದೆ. ಉತ್ಪಾದನೆಯನ್ನು ಹೆಚ್ಚಿಸಲು ಮತ್ತು ಸಾರ್ವಜನಿಕರ ಅಗತ್ಯಗಳನ್ನು ಪೂರೈಸಲು ಬ್ಯಾಂಕುಗಳ ಮೂಲಕ ಈ ಸಂಚಿತ ರಾಷ್ಟ್ರೀಯ ಸಂಪತ್ತನ್ನು ಬಳಸಿಕೊಳ್ಳಲಾಗುತ್ತಿದೆ.

ಆದಾಗ್ಯೂ, ಕಳೆದ ಕೆಲವು ವರ್ಷಗಳಲ್ಲಿ ಆರ್ಥಿಕ ಚಟುವಟಿಕೆ ಪ್ರಮಾಣ ಹೆಚ್ಚಿದ್ದರಿಂದ (1979ರ ಕೊನೆಯಲ್ಲಿ ಸ್ಥಿರ ಉತ್ಪಾದನೆ ಆಸ್ತಿಗಳು ಒಂದು ಲಕ್ಷ ಕೋಟಿ ರೂಬ್‌ಲ್‌ಗಳಿಗಿಂತ ಅಧಿಕವಾಗಿದ್ದು, ವಾರ್ಷಿಕ ಆಯವ್ಯಯ ಆರ್ಥಿಕ ಹಂಚಿಕೆಗಳು 125 ಶತ ಕೋಟಿ ರೂಬ್‌ಲ್‌ಗಳನ್ನೂ ಮೀರಿತ್ತು.) ವಿನಿಯೋಜನೆಯ ಮೇಲೆ ಕಟ್ಟುನಿಟ್ಟಾದ ನಿಯಂತ್ರಣಗಳನ್ನು ಜಾರಿಗೆ ತರುವುದು ಅಗತ್ಯವಾಯಿತು. ಪಶ್ಚಿಮದಲ್ಲಿ ಸಾಮಾನ್ಯವಾಗಿರುವಂತೆ ಇದು ಅತಿಯಾಗಿ ಬಿಸಿಯೇರಿದ ವ್ಯವಹಾರ ಪರಿಸ್ಥಿತಿಯನ್ನು ತಣ್ಣಗೆ ಮಾಡುವ ಪ್ರಶ್ನೆಯಲ್ಲ. ಏಕೆಂದರೆ ಯೋಜಿತ ಅರ್ಥವ್ಯವಸ್ಥೆಯ ಸಂಕಟರಹಿತ ಸ್ವರೂಪ ಹಾಗೂ ಸ್ಥಿರತೆಯಿಂದಾಗಿ ಅಪರಿಮಿತ ವಿಕಾಸ ಸಾಧ್ಯತೆಗೆ ಎಡೆಯಾಗುತ್ತದೆ. ಈಗ ಸೋವಿಯತ್ ಅರ್ಥವ್ಯವಸ್ಥೆ ಕೈಗಾರಿಕೆಗಳ ಗುಣಾತ್ಮಕ ಪುನರ್ರಚನೆಯ ಮತ್ತು ಸಾರ್ವಜನಿಕರಲ್ಲಿ ಒಳ್ಳೆಯ ಗುಣಮಟ್ಟದ ಸರಕುಗಳಿಗಾಗಿ

ಅಧಿಕವಾಗಿರುವ ಬೇಡಿಕೆಯ ಪೂರೈಕೆ ಮಾಡುವ ಹೊಸ ಹೊಸ ಸವಾಲುಗಳನ್ನು ಎದುರಿಸಬೇಕಾಗಿದೆ.

ಎಲ್ಲಕ್ಕಿಂತ ಮಿಗಿಲಾಗಿ ಸೋವಿಯತ್ ಅರ್ಥವ್ಯವಸ್ಥೆಯ ವಲಯ ಸಂರಚನೆಯಲ್ಲಿ ಗುಣಾತ್ಮಕ ಹಾಗೂ ಪ್ರಗತಿಪರ ಬದಲಾವಣೆಗಳಿಗೆ ನೇರವಾಗಿ ಪ್ರವರ್ತನೆ ನೀಡುವ ಆರ್ಥಿಕ ವಲಯಗಳಿಗೆ ಚೋದನೆ ನೀಡುವುದೇ ಉದರಿ ನೀತಿಯಲ್ಲಿಯ ಬದಲಾವಣೆಗಳ ಗುರಿಯಾಗಿದೆ. ಸೋವಿಯತ್ ಒಕ್ಕೂಟದ ಕಮ್ಯೂನಿಸ್ಟ್ ಪಕ್ಷದ ಕೇಂದ್ರ ಸಮಿತಿ ಮತ್ತು ಸೋವಿಯತ್ ಸಮಾಜವಾದಿ ಗಣರಾಜ್ಯಗಳ ಒಕ್ಕೂಟದ ಮಂತ್ರಿಮಂಡಲ ಕಳೆದ ವರ್ಷ ಅಂಗೀಕರಿಸಿದ, ಯೋಜನೆಯನ್ನು ಸುಧಾರಿಸುವ ಮತ್ತು ಕಾರ್ಯ ಸಾಮರ್ಥ್ಯ ಮತ್ತು ಕೆಲಸದ ಗುಣಮಟ್ಟದ ಬೆಳವಣಿಗೆಯ ಮೇಲೆ ಆರ್ಥಿಕ ವ್ಯವಸ್ಥೆಯ ಪರಿಣಾಮವನ್ನು ಹೆಚ್ಚಿಸುವ, ಅಭಿವೃದ್ಧಿಗೊಳಿಸುವ ತೀರ್ಮಾನದಲ್ಲಿ ಬ್ಯಾಂಕುಗಳ ಪಾತ್ರವನ್ನು ಗಣನೀಯವಾಗಿ ಹೆಚ್ಚಿಸುವುದಕ್ಕೆ ಅವಕಾಶ ಕಲ್ಪಿಸಿದೆ. ಉದರಿ ಸೌಲಭ್ಯಗಳನ್ನು ಕಡಿಮೆ ಮಾಡಿ, ಅಧಿಕವಾಗಿ ಬೇಡಿಕೆಯಲ್ಲಿರುವ ಸರಕುಗಳ ಉತ್ಪತ್ತಿಯನ್ನು ಹೆಚ್ಚಿಸುವ ಬಗ್ಗೆ ಸೂಚನೆಗಳನ್ನು ರೂಪಿಸುವ ಕಾರ್ಯದಲ್ಲಿ ಬ್ಯಾಂಕುಗಳು ಬಲು ತೀವ್ರವಾಗಿ ನಿರತವಾಗುತ್ತಿವೆ. 1980ರ ಆರಂಭದಲ್ಲಿ ಲಘು ಕೈಗಾರಿಕೆಗಾಗಿ ಮತ್ತು ಸಂಗ್ರಹಣೆ ವ್ಯವಸ್ಥೆಯನ್ನು ಕ್ರಮಬದ್ಧಗೊಳಿಸುವುದಕ್ಕಾಗಿ 32.4 ಶತ ಕೋಟಿ ರೂಬ್‌ಲ್‌ಗಳ ಉದರಿಯನ್ನು ತೆಗೆದಿಡಲಾಯಿತು.

ಸರಕು ವ್ಯಾಪಾರದ ಬೆಳವಣಿಗೆಗೆ ಅನುಕೂಲವಾಗುವಂತೆ ಪ್ರಭಾವ ಬೀರುವ ವಿನಿಯೋಜನೆಗಳನ್ನು ಉತ್ತೇಜಿಸಲು ಸೋವಿಯತ್ ಒಕ್ಕೂಟದ ವಿತ್ತ ಸಚಿವಾಲಯಕ್ಕೂ ಸ್ಟೇಟ್ ಬ್ಯಾಂಕಿಗೂ ಅಧಿಕಾರವಿದೆ. ಸೋವಿಯತ್ ಯೋಜನೆಗಳಲ್ಲಿ ಮತ್ತೊಂದು ಹೊಸ ವೈಶಿಷ್ಟ್ಯವೆಂದರೆ ಹಣ ನೀಡಿಕೆಯ ನೀತಿಯನ್ನು ನಿರ್ಧರಿಸಬಲ್ಲ ಹಣ ಶಿಲ್ಕುಗಳನ್ನು ಪಂಚವಾರ್ಷಿಕ ಯೋಜನೆಗಳಲ್ಲಿ ಅಳವಡಿಸಿರುವುದು.

ಹೀಗೆ, ಇದು ಸೋವಿಯತ್ ಆರ್ಥಿಕ ಸ್ಥಿತಿಯನ್ನು 'ತಣ್ಣಗಾಗಿಸುವ' ಅಥವಾ 'ಬಿಸಿ ಮಾಡುವ' ಪ್ರಶ್ನೆಯಲ್ಲ; ಆದರೆ ಗುಣಾತ್ಮಕ ಬದಲಾವಣೆಗಳ ನಿಯಂತ್ರಣಕ್ಕೆ ಉದರಿಯನ್ನು ಬಳಸುವ ಕ್ರಮ.

### ಅವ್ಯವಸ್ಥೆಗೆ ಕಡಿವಾಣ

ನಿರ್ಮಾಣ ಕಾರ್ಯದಲ್ಲಿಯ ವಿನಿಯೋಜನೆಗಳಿಗೆ ಹಣವನ್ನು ಒದಗಿಸುವ ನೀತಿಯಲ್ಲೂ ಬದಲಾವಣೆಗಳನ್ನು ಮಾಡಲಾಗುತ್ತದೆ. ರಾಷ್ಟ್ರೀಯ ವರಮಾನದ 1/5 ಭಾಗ ಇದಕ್ಕಾಗಿ ಹೋಗುತ್ತದೆ. ಈ ಕ್ಷೇತ್ರದಲ್ಲಿ ಹಣದ ಮೂಲಕ ಆರ್ಥಿಕ ಶಿಸ್ತನ್ನು ಸಾಧಿಸಲು ಉದರಿಯನ್ನು ಬಳಸಲಾಗುತ್ತದೆ. ಕಳೆದ ಕೆಲವು ವರ್ಷಗಳಲ್ಲಿ ಅಪೂರ್ಣ ಕಾಮಗಾರಿಯಿಂದಾಗಿ ಬಹಳಷ್ಟು ನಷ್ಟವನ್ನು ಅರ್ಥವ್ಯವಸ್ಥೆ ಅನುಭವಿಸುತ್ತಿದೆ. ಈ ತೊಂದರೆಗಳ ಹಿಂದಿರುವ ಕಾರಣಗಳಲ್ಲಿ ಒಂದೆಂದರೆ ನಿರ್ಮಾಣ ಕಾರ್ಯದ ಲೆಕ್ಕ ಪದ್ಧತಿ ಮತ್ತು ಕಂಟ್ರಾಕ್ಟರುಗಳ ಕಾಮಗಾರಿ ಅವಧಿಯನ್ನು ಕಡಿಮೆ ಮಾಡುವಂತೆ ಅವರಿಗೆ ಉತ್ತೇಜಿಸದಿದ್ದುದು. ಈಗ ಲೆಕ್ಕ ಪದ್ಧತಿಯನ್ನು ಸಂಪೂರ್ಣ ಬದಲಾಯಿಸಲಾಗಿದೆ. ನಿರ್ಮಾಣ ಕಾರ್ಯದ ವಿನಿಯೋಜನೆಗೆ ಅನುಕೂಲವಾಗುವಂತೆ ಹಣಕಾಸು ಸಂಸ್ಥೆಗಳ ನಿಯಂತ್ರಣ ಮತ್ತು ಯೋಜನಾ ಕಾರ್ಯಗಳನ್ನು ಅಧಿಕಗೊಳಿಸಲಾಗಿದೆ. 6,000 ಪರಿಯೋಜನೆಗಳನ್ನು ಯೋಜನೆಯಿಂದ ಹೊರತುಪಡಿಸಲಾಯಿತು.

ಈ ವರ್ಷದ ಅಂತ್ಯದೊಳಗೆ ಅರ್ಧದಷ್ಟು ನಿರ್ಮಾಣ ಟ್ರಸ್ಟುಗಳು ಹೊಸ ಲೆಕ್ಕ ಪದ್ಧತಿಗೆ ಬದಲಾಯಿಸುತ್ತವೆ. 11ನೆಯ ಪಂಚವಾರ್ಷಿಕ ಯೋಜನೆ ಪ್ರಾರಂಭವಾಗುವ ಹೊತ್ತಿಗೆ ಈ ಬದಲಾವಣೆಯನ್ನು ಪೂರ್ಣಗೊಳಿಸಲಾಗುವುದು. ಮುಂಗಡ ಪಾವತಿ ಮಾಡುವ ಪದ್ಧತಿಯನ್ನು ರದ್ದುಗೊಳಿಸುವುದರಿಂದ ಮತ್ತು ಕಟ್ಟುನಿಟ್ಟಾಗಿ ನಿಯಂತ್ರಣದ ಬ್ಯಾಂಕ್ ಉದರಿ ನೀಡುವುದರಿಂದ ನಿರ್ಮಾಣ ಅವಧಿ ಸೇ. 14 ರಷ್ಟು ಕಡಿಮೆಯಾಗುತ್ತದೆ. ಬೈಲೋರಷ್ಯದ ಅನುಭವವಿದು. ನಿರ್ಮಾಣವನ್ನು ನಿಶ್ಚಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಸಾಲಗಾರರು ಸಾಕಷ್ಟು ಅಧಿಕ ಬಡ್ಡಿಯನ್ನು ಕೊಡಬೇಕಾಗುತ್ತದೆ.

ಆರ್ಥಿಕ ಸುಭದ್ರ ಸವ್ಯವಸ್ಥೆಯ ಮೇಲೆ ಉದರಿಯ ಬೆಳೆಯುತ್ತಿರುವ ಪಾತ್ರದಿಂದಾಗಿ ನಿಷ್ಪಕ್ಷಪಾತವಾದ ಬ್ಯಾಂಕ್ ಲೆಕ್ಕಗಳ ಸತತ ನಿಯಂತ್ರಣದಲ್ಲಿರುವ ಬ್ಯಾಂಕ್ ಉದರಿಯ ಸಹಾಯದಿಂದ ರಚಿಸಲಾದ ಪರಿಯೋಜನೆಗೆ ಸಂಬಂಧಿಸಿದ ನಿರ್ಮಾಣ ಕಾರ್ಯವನ್ನು ಪೂರೈಸದಿದ್ದರೆ ಹೆಚ್ಚಿನ ಬಡ್ಡಿ ದರವನ್ನು ತೆರಬೇಕಾಗುತ್ತದೆ.

ಸೋವಿಯತ್ ರಷ್ಯದ ಬ್ಯಾಂಕಿಂಗ್ ಮತ್ತು ಉದರಿ ರಚನೆಯ ಸುಧಾರಣೆಯ ಕಾರ್ಯ ಪ್ರತ್ಯೇಕವಾದ್ದೇನೂ ಅಲ್ಲ. ಆರ್ಥಿಕ ವ್ಯವಸ್ಥಾಪನದ ಸಾರ್ವತ್ರಿಕ ಮಟ್ಟವನ್ನು ಹೆಚ್ಚಿಸುವ ಪ್ರಯತ್ನದ ಭಾಗವಿದು. ಇದರ ಮಹತ್ವವನ್ನು ಎಲ್. ಐ. ಬ್ರೆಜ್ನೇವ್ 1979ರ ನವೆಂಬರ್‌ನಲ್ಲಿ ಸೇರಿದ್ದ ಸೋವಿಯತ್ ಒಕ್ಕೂಟದ ಕಮ್ಯೂನಿಸ್ಟ್ ಪಕ್ಷದ ಕೇಂದ್ರ ಸಮಿತಿಯ ಸಭೆಯಲ್ಲಿ ಒತ್ತಿ ಹೇಳಿದ್ದರು. ಪ್ರಚಲಿತ ಉದರಿ ಸುಧಾರಣೆ ಬೆಳೆಯುತ್ತಿರುವ ಸೋವಿಯತ್ ಆರ್ಥಿಕ ಸಂಘಟನೆಯ ನೈಜ ಅಗತ್ಯಗಳಿಗೆ ಉತ್ತರವಾಗಿದೆ.

# ಕೃಷಿ ಬ್ಯಾಂಕಿಂಗ್

ಅ. ಚ. ಅಶೋಕ ಕುಮಾರ

## 1982 ಏಪ್ರಿಲ್ 6ರಿಂದ 9ರ ವರೆಗೆ ಮೈಸೂರಿನಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ನಡೆದ ಬ್ಯಾಂಕಿಂಗ್ ಸಾಹಿತ್ಯ ಕಮ್ಮಟದಲ್ಲಿ ಮಂಡಿಸಲಾದ ಒಂದು ಪ್ರಬಂಧ

ಭಾರತದಂತಹ ವಿಶಾಲವಾದ ದೇಶದಲ್ಲಿ ಕೃಷಿಗೆ ಬಹಳ ಪ್ರಾಧಾನ್ಯವಿದೆ. ಸಾವಿರಾರು ವರ್ಷಗಳಿಂದ ಈ ದೇಶದಲ್ಲಿ ಪ್ರಮುಖ ಕಸುಬು ವ್ಯವಸಾಯ. ಜನಸಂಖ್ಯೆ ಎಷ್ಟೇ ಹೆಚ್ಚಿದರೂ ಇದಕ್ಕೆ ಧಕ್ಕೆಯಾಗಲಿಲ್ಲ. ಏಕೆಂದರೆ ದೇಶದಲ್ಲಿ ಲಭ್ಯವಿದ್ದ ಅಗಾಧವಾದ ಭೂಪ್ರದೇಶ. ಅತಿ ಹೆಚ್ಚಿನ ಜನರು ಸಣ್ಣ ಮತ್ತು ಅತಿ ಸಣ್ಣ ರೈತರು. ಅವರ ವಶದಲ್ಲಿರುವ ಭೂಮಿ ಬಹಳ ಕಮ್ಮಿ. ವ್ಯವಸಾಯ ಪದ್ಧತಿಯೂ ಬಹು ಪ್ರಾಚೀನ. ರೈತರ ಮುಖ್ಯ ಉದ್ದೇಶ ತಮಗೆ ಸಾಕಾಗುವಷ್ಟು ಮಾತ್ರ ಧಾನ್ಯವನ್ನು ಬೆಳೆದುಕೊಳ್ಳುವುದು. ಕಾಲ ಉರುಳುತ್ತಾ ಮಾನವ ಪರಾವಲಂಬಿಯಾದ. ಆಗ ಬೇರೆ ಪದಾರ್ಥಗಳಿಗೆ ಬೇರೆಯವರ ಹತ್ತಿರ ಹೋಗ ಬೇಕಾಯಿತು. ಆಗ ತನಗೆ ಇರುವ ಭೂಮಿಯಲ್ಲಿಯೇ ಹೆಚ್ಚು ಬೆಳೆ ತೆಗೆಯುವ ಕ್ರಮ ಅನುಸರಿಸಬೇಕಾಯಿತು. ಅಂದರೆ ಸುಧಾರಿತ ತಳಿಗಳ, ಹೆಚ್ಚಿನ ಇಳುವರಿ ಕೊಡುವ ಬೀಜಗಳ, ರಾಸಾಯನಿಕ ಗೊಬ್ಬರಗಳ ಉಪಯೋಗ, ಯಾಂತ್ರೀಕರಣ ಇತ್ಯಾದಿ. ಇದಕ್ಕೆ ಹಣ ಆವಶ್ಯಕ. ಆಗ ಕೃಷಿಕ್ಷೇತ್ರಕ್ಕೆ ಬ್ಯಾಂಕುಗಳ ಪ್ರವೇಶ.

ಹಸಿರುಕ್ರಾಂತಿ 1960ರ ಮಧ್ಯಭಾಗದಲ್ಲಿ ಶುರು ವಾಯಿತು. ಇದರ ಪರಿಣಾಮ ಎಂದರೆ ಹೆಚ್ಚಿನ ಬೆಲೆಯ ಉಪಕರಣಗಳ ಪ್ರಯೋಗ. ಸಾಲಗಳನ್ನು ಸಹಕಾರ ಕ್ಷೇತ್ರಗಳಲ್ಲಿ ಮಾತ್ರ ಈ ವರೆಗೆ ಕೊಡಲಾಗುತ್ತಿತ್ತು. ಮುಂದೆ ಇವುಗಳಿಂದ ಮಾತ್ರ ಸಾಲನೀಡಿಕೆ ಸಾಧ್ಯವಾಗಲಿಲ್ಲ. ಆಗ ವಾಣಿಜ್ಯ ಬ್ಯಾಂಕುಗಳು ಪ್ರವೇಶ ಮಾಡಿದುವು. 1968ರ ತನಕ ಈ ಕ್ಷೇತ್ರದಲ್ಲಿ ಯಾವುದೇ ಸಾಲ ನೀಡಿರಲಿಲ್ಲ. 1968ರ ಸಾಮಾಜಿಕ ನಿಯಂತ್ರಣ ಮತ್ತು 1969ರ ಬ್ಯಾಂಕುಗಳ ರಾಷ್ಟ್ರೀಕರಣದಿಂದ ಕೃಷಿ ಸಾಲ ನೀಡುವುದಕ್ಕೆ ಮಹತ್ವ ಬಂತು.

ಈ ಮುಂಚೆಯೇ ತಿಳಿಸಿರುವ ಪ್ರಕಾರ ಇಲ್ಲಿಯ ತನಕ ಸಹಕಾರ ಕ್ಷೇತ್ರಗಳ ಮೂಲಕ ಮಾತ್ರ ಸಾಲ ನೀಡಲಾಗುತ್ತಿತ್ತು. ಅವುಗಳಿಂದ ಅಗಾಧವಾದ ಸಾಲ ಬೇಡಿಕೆಗಳನ್ನು ಪೂರೈಸಲಾಗಲಿಲ್ಲ. ಆದುದರಿಂದ ವಾಣಿಜ್ಯ ಬ್ಯಾಂಕುಗಳು ಈ ದಿಸೆಯಲ್ಲಿ ದೊಡ್ಡ ಹೆಜ್ಜೆಯನ್ನು ಇಟ್ಟುವು.

ಮೊದಲು ಅವು ಗುಣಮಟ್ಟದ ಕಡೆ ಗಮನ ಕೊಡದೆ ಬರೀ ಸಂಖ್ಯಾದೃಷ್ಟಿಯಿಂದ ಸಾಲ ನೀಡಲು ಮುಂದಾದುವು. ಮುಂದಿನ ಅಂಕಿ ಅಂಶಗಳಿಂದ ಇದು ಸ್ಪಷ್ಟವಾಗುತ್ತದೆ, ಸಾಲ ರೂ. 40.2 ಕೋಟಿಯಿಂದ 1974ರ ವೇಳೆಗೆ ರೂ. 1,526 ಕೋಟಿಗೆ ಏರಿತು. ಇಷ್ಟೆಲ್ಲಾ ಸಾಲ ನೀಡಿದರೂ ಬ್ಯಾಂಕುಗಳಿಗೆ ಆ ಕ್ಷೇತ್ರದಲ್ಲಿ ಹೇಳಿಕೊಳ್ಳುವ ಯಾವುದೇ ರೀತಿಯ ಹೆಚ್ಚಿನ ಜ್ಞಾನ ಇರಲಿಲ್ಲ.

ಬ್ಯಾಂಕುಗಳು ಸಾಲ ನೀಡಿಕೆಯಲ್ಲಿ ಯಾವುದೇ ಕ್ರಮವಾದ ಹೆಜ್ಜೆಯನ್ನು ಇರಿಸದೆ ಚದುರಿದ ಸಾಲವನ್ನು ಕೊಟ್ಟುವು. ಇದರಿಂದ ಕೆಲವು ತೊಡಕುಗಳನ್ನು ಎದುರಿಸಬೇಕಾಯಿತು. ಸಾಲಗಾರರು ಒಂದು ಕಡೆ ಇಲ್ಲ. ಸಣ್ಣ ಮೊತ್ತದ ಸಾಲಗಳು. ಒಂದು ಹಳ್ಳಿಯಲ್ಲಿ ಒಬ್ಬ ಸಾಲಗಾರ, ಮತ್ತೊಂದು ಹಳ್ಳಿಯಲ್ಲಿ ಮತ್ತೊಬ್ಬ. ಹೀಗೆ, ಸಾಲದ ಅನಂತರದ ಪರಿಶೀಲನೆ, ಖರ್ಚು ಮುಂತಾದ ಅನೇಕ ತೊಡಕುಗಳನ್ನು ಎದುರಿಸ ಬೇಕಾಯಿತು.

ಈ ತೊಂದರೆಗಳನ್ನು ಎದುರಿಸಲು ಪರಿಣತಿ ಹೊಂದಿದ ವಿದ್ವಾಂಸರನ್ನು ನೇಮಿಸಿಕೊಂಡರು. ಕೃಷಿ ಗುಮಾಸ್ತರು

ಗಳ ನೇಮಕವಾಯಿತು. ಇದರಿಂದ ಕೃಷಿ ಅಭಿವೃದ್ಧಿ ಶಾಖೆಗಳ ಪ್ರಾರಂಭ. ಪ್ರತಿಯೊಂದು ಶಾಖೆಯೂ ಅದರ 40 ಕಿ.ಮೀ. ವ್ಯಾಪ್ತಿಯಲ್ಲಿ ಬರುವ ನೂರು ಹಳ್ಳಿಗಳ ಸಮೂಹಕ್ಕೆ ಸಾಲ ನೀಡಿಕೆ. ಇದರಿಂದ ಒಂದು ಶಾಖೆಯಿಂದ ಸುಮಾರು ಒಂದು ಲಕ್ಷ ಜನರಿಗೆ ಅನುಕೂಲ.

ಈ ಶಾಖೆಗಳಿಗೆ ಸರಿಯಾಗಿ ಸೂಕ್ತವಾದ ನಿರ್ದೇಶನ ನೀಡಲು ಆಡಳಿತ ಕಛೇರಿಯಲ್ಲಿ ಪ್ರತ್ಯೇಕವಾದ ವಿಭಾಗ ತೆರೆಯಲಾಯಿತು, ಅಲ್ಲಿ ಪ್ರತಿಯೊಂದು ವಿಭಾಗದಲ್ಲಿಯೂ ಅಂದರೆ ಶಾಸ್ತ್ರೀಯ ಬೇಸಾಯ, ಹೈನುಗಾರಿಕೆ, ಇತ್ಯಾದಿಗಳಲ್ಲಿ ಪರಿಣತಿ ಹೊಂದಿದ ವಿದ್ವಾಂಸರುಗಳಿಂದ ಸೂಕ್ತ ಮಾರ್ಗದರ್ಶನ.

ಸಾಲ ನೀಡುವಿಕೆಯಲ್ಲಿ ಹೊಸ ದೃಷ್ಟಿಯನ್ನು ಬ್ಯಾಂಕುಗಳು ಬೆಳೆಸಿಕೊಂಡುವು. ಅವೆಂದರೆ ಅಭಿವೃದ್ಧಿ ಪ್ರಧಾನವಾದ ಸಾಲಗಳು, ಅಭಿವೃದ್ಧಿ ಪ್ರಧಾನ ಯೋಜನೆಗಳನ್ನು ತಯಾರಿಸಿ ಸಾಲ ನೀಡಿಕೆ ಇತ್ಯಾದಿ.

ದೇಶದಲ್ಲಿ ಅತಿ ಪ್ರಮುಖವಾಗಿ ನೆರವು ಬೇಕಾಗಿದ್ದವರು ಸಣ್ಣ ಮತ್ತು ಅತಿ ಸಣ್ಣ ರೈತರು. ಇವರಿಗೆ ಬ್ಯಾಂಕುಗಳು ಅತಿ ಹೆಚ್ಚಿನ ಮಹತ್ವ ನೀಡಲು ಆರಂಭಿಸಿದುವು. ನೇರ ಸಾಲದಲ್ಲಿ ಪ್ರತಿಶತ 67ರಷ್ಟನ್ನು 1978ರ ಮಾರ್ಚ್ ವೇಳೆಗೆ ಐದು ಎಕರೆಗಿಂತ ಕಮ್ಮಿ ಜಮೀನು ಹೊಂದಿರುವ ರೈತರಿಗೆ ಸಾಲ ನೀಡಿತ್ತು. ಹಣದ ಲೆಕ್ಕದಲ್ಲಿ ಹೇಳುವುದಾದರೆ ಇದು ಪ್ರತಿಶತ 39.

1978ರಲ್ಲಿ ಭಾರತ ಸರ್ಕಾರ 'ವಾಣಿಜ್ಯ ಬ್ಯಾಂಕುಗಳಿಂದ ಕೃಷಿ ಸಾಲ ನೀಡುವಿಕೆ' ಬಗ್ಗೆ ಒಂದು ಸಮಿತಿಯನ್ನು ರಚಿಸಿತು. ಅದರ ಪ್ರಕಾರ ಕೃಷಿ ಅಭಿವೃದ್ಧಿಗಾಗಿ 1978ರಿಂದ 1983ರ ವರೆಗೆ ರೂ. 3,890 ಕೋಟಿಯ ಆವಶ್ಯಕತೆ ಇದೆ ಎಂದು ವರದಿ ಮಾಡಿತು. ಇದು ಬರೀ ಅಲ್ಪಾವಧಿ ಸಾಲ ಮಾತ್ರ. ದೀರ್ಘಾವಧಿ ಸಾಲದ ಆವಶ್ಯಕತೆ ರೂ. 6,290 ಕೋಟಿ.

ಈ ರೀತಿ ಕೃಷಿ ಸಾಲದ ಬೆಳವಣಿಗೆಯಲ್ಲಿ ಬ್ಯಾಂಕುಗಳ ಪಾತ್ರ ದಿನೇ ದಿನೇ ಹೆಚ್ಚುತ್ತಿದೆ. ಅವು ಕೆಲವು ತೊಡಕುಗಳನ್ನು ಎದುರಿಸಬೇಕಾಯಿತು. ಸದಾ ಕಾಲದಲ್ಲಿ ಭಾರತದ ಒಂದಲ್ಲ ಒಂದು ಭಾಗದಲ್ಲಿ ಅತಿವೃಷ್ಟಿ ಅಥವಾ ಅನಾವೃಷ್ಟಿಯಿಂದ ತೊಂದರೆ ಉಂಟಾಗುತ್ತದೆ. ಇದರಿಂದ ಬೆಳೆಗೆ ಧಕ್ಕೆ. ಮರುಪಾವತಿಯೂ ಇಲ್ಲ. ಈ ಅಗಾಧವಾದ ಖಾತೆಗಳಿಂದ ಆದ ಖರ್ಚು ವೆಚ್ಚಗಳೂ ಅಪಾರ. ತಾಂತ್ರಿಕ ಅಧಿಕಾರಿಗಳ ನೇಮಕ. ಇವರ ವೇತನ ಶ್ರೇಣಿ ಬೇರೆಯವರದಕ್ಕಿಂತ ಅಧಿಕ. ಇವರಿಗೆ ತರಬೇತಿ. ಪ್ರತ್ಯೇಕವಾದ ಕೃಷಿ ವಿಭಾಗ. ಆಡಳಿತ ಕಛೇರಿಯಲ್ಲಿ ತರಬೇತಿಗೆ ಪ್ರತ್ಯೇಕ ಕೇಂದ್ರಗಳು. ಹೀಗೆ ಖರ್ಚು ಮುಗಿಲಿಗೇರಿತು. ಭಾರತೀಯ ಸ್ಟೇಟ್ ಬ್ಯಾಂಕಿನವರು ನಡೆಸಿದ ಅಧ್ಯಯನದ ಪ್ರಕಾರ ಕೃಷಿ ಸಾಲ ಬ್ಯಾಂಕುಗಳ ಲಾಭಾಂಶದ ಮೇಲೆ ಪರಿಣಾಮ ಉಂಟಾಯಿತು.

ಇದಲ್ಲದೆ ಪರಿಣತಿ ಹೊಂದಿದ ಸಿಬ್ಬಂದಿಯ ಕೊರತೆ ಒಂದು ಪ್ರಮುಖ ಅಂಶವಾಯಿತು. ಸರ್ಕಾರದಿಂದ ಅಧಿಕಾರಿಗಳನ್ನು ಎರವಲು ಪಡೆಯಬೇಕಾಯಿತು. ಈ ಅಧಿಕಾರಿಗಳು ಬ್ಯಾಂಕಿನ ನೀತಿ ನಿಯಮಗಳಿಗೆ ಹೊಂದಿಕೊಳ್ಳಲು ಕಷ್ಟವಾಯಿತು.

ರೈತರಿಗೆ ಬರೀ ಹಣದ ಸಹಾಯ ಒಂದೇ ಅಲ್ಲದೆ ಬೇರೆ ರೀತಿಯ ಮಾರ್ಗದರ್ಶನ ಮತ್ತು ಸಹಾಯಗಳ ಆವಶ್ಯಕತೆ ಇತ್ತು. ಅವುಗಳೆಂದರೆ ಹೆಚ್ಚು ಇಳುವರಿ ಕೊಡುವ ಹಾಗೂ ಸಂಕೀರ್ಣ ತಳಿಗಳ ಬಳಕೆ, ಯಾಂತ್ರೀಕರಣ, ಸುಧಾರಿತ ಬೇಸಾಯ ಪದ್ಧತಿ, ಬಹು ಬೆಳೆಯ ಯೋಜನೆ ಮತ್ತು ರಿಲೇ ಪದ್ಧತಿ ಯೋಜನೆ, ಉತ್ಪಾದನ ವೆಚ್ಚಕ್ಕೆ ಸರಿತೂಗಿಸುವ ಬೆಲೆ ನಿಷ್ಕರ್ಷೆ. ಬೆಳೆದ ದವಸ ಧಾನ್ಯಗಳಿಗೆ ಮಾರುಕಟ್ಟೆ.

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಉದಯದಿಂದ ಈ ದಿಸೆಯಲ್ಲಿ ಗಮನಾರ್ಹವಾದ ಪ್ರಗತಿ ಕಂಡಿತು. 1979ರಲ್ಲಿ 60 ಇದ್ದ ಇದರ ಶಾಖೆಗಳ ಸಂಖ್ಯೆ ಕೇವಲ ನಾಲ್ಕು ವರ್ಷಗಳಲ್ಲಿ 2,420 ಆಯಿತು.

ರಿಸರ್ವ್ ಬ್ಯಾಂಕ್ ಕೂಡ ವಾಣಿಜ್ಯ ಬ್ಯಾಂಕುಗಳಿಗೆ ತನ್ನ ಸಾಲದಲ್ಲಿ ಆದ್ಯತೆ ಕ್ಷೇತ್ರಗಳಿಗೆ ಹೆಚ್ಚಿನ ಪಾಲು ನೀಡಬೇಕೆಂದು ನಿಗದಿ ಮಾಡಿತು. ಅದರಲ್ಲಿ ಕೃಷಿಗೆ ಹೆಚ್ಚು ಪ್ರಾಮುಖ್ಯ ಕೊಟ್ಟಿತು.

ಕೃಷಿ ಮರು ಸಾಲ ಮತ್ತು ಅಭಿವೃದ್ಧಿ ನಿಗಮದ ಪಾತ್ರ ಗಮನಾರ್ಹ. ಬ್ಯಾಂಕುಗಳು ತಾವು ನೀಡಿದ ಸಾಲದ ಮರುಪಾವತಿಯನ್ನು ಈ ಮೇಲ್ಕಂಡ ನಿಗಮದಿಂದ ಕೆಲವು ಕಡೆ ಪಡೆಯಬಹುದಾಗಿದೆ. ಆದುದರಿಂದ ವಾಣಿಜ್ಯ ಬ್ಯಾಂಕುಗಳು ಈ ಕ್ಷೇತ್ರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಾಲ ನೀಡಿವೆ.

ಭಾರತೀಯ ಸ್ಟೇಟ್ ಬ್ಯಾಂಕು ಈ ದಿಸೆಯಲ್ಲಿ ಗಮನಾರ್ಹವಾದ ಪ್ರಗತಿಯನ್ನು ಸಾಧಿಸಿದೆ. 'ಗ್ರಾಮೋದಯ' ಎಂಬ ಹೊಸ ಯೋಜನೆಯ ಉದಯವಾಗಿದೆ. ಇದರ ಮುಖ್ಯ ಉದ್ದೇಶ, ಪ್ರತಿಯೊಂದು ಸಂಸಾರದ ಆದಾಯವನ್ನು ಕನಿಷ್ಠ ರೂ. 3,500ಕ್ಕೆ ಏರಿಸುವುದು. ಇದಕ್ಕೋಸ್ಕರ ಮೊದಲನೆಯದಾಗಿ ಒರಿಸ್ಸಾ ಸರ್ಕಾರದ ಕಾಳಾಹಂದಿ ಮತ್ತು ಪುಲಬಾನಿ ಜಿಲ್ಲೆಗಳ 5,000 ಸಂಸಾರಗಳನ್ನು ಆರಿಸಿಕೊಳ್ಳಲಾಯಿತು.

ಇತ್ತೀಚೆಗೆ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ರೀತಿಯ ನೆರವು ನೀಡಲು ಒಂದು ಪ್ರತ್ಯೇಕವಾದ ಹಣಕಾಸು ಸಂಸ್ಥೆಯ ಆವಶ್ಯಕತೆಯನ್ನು ಸರ್ಕಾರ ಗಮನಿಸಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್‌ನ ರಚನೆಯ ಬಗ್ಗೆ ಲೋಕ ಸಭೆಯಲ್ಲಿ ಒಂದು ಮಸೂದೆಯನ್ನು ಮಂಡಿಸಿತು.

ಇದರ ಮೂಲ ಬಂಡವಾಳ ರೂ. 100 ಕೋಟಿ. ಆದರೆ ಕೇಂದ್ರ ಸರ್ಕಾರ ಇದನ್ನು ರೂ 500 ಕೋಟಿಗೆ ಹೆಚ್ಚಿಸುವ ಅಧಿಕಾರ ಪಡೆದಿದೆ. ಉದ್ದೇಶ—ಗ್ರಾಮೀಣ ಪ್ರದೇಶಗಳಲ್ಲಿ ಸಣ್ಣ ಕೈಗಾರಿಕೆ, ಗೃಹ ಮತ್ತು ಗುಡಿ ಕೈಗಾರಿಕೆ, ಕರಕುಶಲ ವಸ್ತುಗಳ ತಯಾರಿಕೆಯ ಯೋಜನೆಗಳನ್ನು ರೂಪಿಸಿ ಅವನ್ನು ಯಶಸ್ವಿಯಾಗಿ ಜಾರಿಗೆ ತರುವುದು. ವ್ಯವಸಾಯ ಕ್ಷೇತ್ರಗಳಲ್ಲಿ ಅಭಿವೃದ್ಧಿ ಚಟುವಟಿಕೆ ನಡೆಸಲು ಅಲ್ಪಾವಧಿ ಸಾಲ ನೀಡುವ ಸಂಸ್ಥೆಗಳಿಗೆ ಈ ಬ್ಯಾಂಕು ಮರುಸಾಲ ನೀಡುತ್ತದೆ.

ಈ ಉದ್ದೇಶಿತ ಬ್ಯಾಂಕು ಭಾರತೀಯ ರಿಸರ್ವ್ ಬ್ಯಾಂಕ್‌ನ ಜೊತೆ ಸಂಪರ್ಕ ಹೊಂದಿರುತ್ತದೆ. ಕೃಷಿ ಮರುಸಾಲ ಮತ್ತು ಅಭಿವೃದ್ಧಿ ನಿಗಮದ ಪೂರ್ತ ಚಟುವಟಿಕೆಗಳನ್ನು ಈ ಬ್ಯಾಂಕು ತೆಗೆದುಕೊಂಡು ಇದರಲ್ಲಿ ವಿಲೀನ ಹೊಂದುತ್ತದೆ.

ಆರನೆಯ ಯೋಜನೆಯಲ್ಲಿ ಬ್ಯಾಂಕು ಬಡತನದ ಗೆರೆಯನ್ನು ದಾಟಲು 1.5 ಕೋಟಿ ಸಂಸಾರಗಳಿಗೆ ನೆರವಾಗಲಿದೆ. ಇದಕ್ಕೋಸ್ಕರ 5,000 ಕ್ಷೇತ್ರಗಳಲ್ಲಿ ಪ್ರತಿ ವರ್ಷ 600 ಸಂಸಾರಗಳನ್ನು ಗುರ್ತಿಸಲಾಗುತ್ತದೆ.

ಬ್ಯಾಂಕುಗಳು ಜನಸಾಮಾನ್ಯರ ತಿಳಿವಳಿಕೆ ಮಟ್ಟವನ್ನು ಹೆಚ್ಚಿಸುವುದರಲ್ಲಿ ಸಹಾಯ ಮಾಡಿವೆ. ಸಣ್ಣ ಮತ್ತು ಅತಿ ಸಣ್ಣ ರೈತರು ಬಹಳ ದುರ್ಬಲರು ಮತ್ತು ಬಡವರು. ಅವರಿಗೆ ಸರಿಯಾದ ಭೂಮಿ ಅಥವಾ ಆಸ್ತಿ ಇಲ್ಲ. ಬರತಕ್ಕ ಆದಾಯ ಅವರು ತಮ್ಮ ಸಂಸಾರವನ್ನು ಪೋಷಣೆ ಮಾಡುವುದಕ್ಕೂ ಸಾಕಾಗುವುದಿಲ್ಲ. ಅಂತಹ ಬಡತನ. ಇವರಿಗೋಸ್ಕರ ಕೆಲವು ವಿಶೇಷ ಯೋಜನೆಗಳನ್ನು ಬ್ಯಾಂಕಿನವರು ತಯಾರಿಸಿದರು. ಕೃಷೀತರ ಚಟುವಟಿಕೆಗಳು, ಹೈನುಗಾರಿಕೆ, ಕುರಿ ಕೋಳಿ ಸಾಕಾಣಿಕೆ ಇತ್ಯಾದಿ. ಇದರಲ್ಲೂ ಬರುವ ಪ್ರತಿಫಲ ಶೂನ್ಯ. ಪ್ರತಿಫಲ ಬಂದರೂ ಸಾಲ ಮರುಪಾವತಿ ಮಾಡಲು ಆಗುವುದಿಲ್ಲ.

ಬ್ಯಾಂಕುಗಳಿಗೆ ಈ ಸಂಸಾರಗಳ ತೊಂದರೆಗಳನ್ನು ಅರಿತುಕೊಳ್ಳುವುದು ಅವಶ್ಯವಾಯಿತು. ಅವರ ಆಸ್ತಿ ಮತ್ತು ಕುಶಲತೆಯನ್ನು ಗಮನದಲ್ಲಿಟ್ಟುಕೊಂಡು ವಿಶೇಷವಾದ ಯೋಜನೆಗಳನ್ನು ತಯಾರಿಸಬೇಕಾಯಿತು. ಉತ್ಪಾದನೆ ಆಗುವ ಸಾಲಗಳ ನೀಡಿಕೆ, ದೈಹಿಕ ಶಕ್ತಿಯ ಉಪಯೋಗ. ಅದಕ್ಕೆ ಪ್ರತಿಫಲವಾಗಿ ಕಾಳು ನೀಡಿಕೆ. ಕೂಲಿಗಾಗಿ ಕಾಳು ಯೋಜನೆ. ಹಲವಾರು ಸಂಘ ಸಂಸ್ಥೆಗಳ ಒಕ್ಕೂಟ.

ಅತಿ ಪ್ರಾಚೀನವಾದ, ದೇಶದ ಬಡತನದ ನಿರ್ಮೂಲತೆಯಲ್ಲಿ ಬ್ಯಾಂಕು ಪ್ರಮುಖ ಪಾತ್ರ ವಹಿಸುತ್ತಿದೆ. ಆರನೆಯ ಯೋಜನೆಯಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಮುಖ್ಯ. ಬ್ಯಾಂಕು ಇದಕ್ಕೆ ನೆರವಾಗುತ್ತದೆ.

ಉನ್ನತ ಮಟ್ಟದ ಸಾಲ ಯೋಜನೆಗಳನ್ನು ಜಾಣತನದಿಂದ ರೂಪಿಸಿ, ಮೂಲದಲ್ಲಿಯೇ ಯೋಜನೆ ತಯಾರು ಮಾಡುವುದನ್ನೂ ಮತ್ತು ಅದನ್ನು ನಿರೂಪಿಸುವುದನ್ನೂ ಬೆಳೆಸಿಕೊಳ್ಳಬೇಕು. ಸಹಕಾರಿ ಬ್ಯಾಂಕುಗಳು ಮತ್ತು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಕೃಷಿ ಸಾಲದಲ್ಲಿ ಪ್ರಮುಖ ಪಾತ್ರ ವಹಿಸಿದರೆ ವಾಣಿಜ್ಯ ಬ್ಯಾಂಕುಗಳು ಸಾಲಯೋಜನೆ ತಯಾರಿಕೆಯ ಹೊಣೆಯನ್ನು ಹೊರಬೇಕಾಗಿದೆ. 20 ಅಂಶಗಳ ಕಾರ್ಯಕ್ರಮ ನಿಜವಾಗಿಯೂ ಸಫಲವಾಗಬೇಕಾದರೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಮತ್ತು ಬಡತನ ನಿರ್ಮೂಲನೆಗಳು ಬ್ಯಾಂಕುಗಳಿಂದ ಮಾತ್ರ ಸಾಧ್ಯ.

### ಕೃಷಿ ಅಭಿವೃದ್ಧಿಯಲ್ಲಿ ಮೈಸೂರು ಬ್ಯಾಂಕು

2ನೆಯ ಅಕ್ಟೋಬರ್ 1913ರಂದು ಮೈಸೂರು ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುವ ಉದ್ದೇಶದಿಂದ ಮೈಸೂರು ಬ್ಯಾಂಕು ಕಾರ್ಯಾರಂಭ ಮಾಡಿತು.

ಮುಂದಿನ ವರ್ಷಗಳಲ್ಲಿ ಬ್ಯಾಂಕು ಅಭಿವೃದ್ಧಿ ಹೊಂದಿ, 1ನೆಯ ಮಾರ್ಚ್ 1960 ರಂದು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯದ ಸಹಾಯಕ ಬ್ಯಾಂಕ್ ಆಯಿತು.

ಕೃಷಿ ಅಭಿವೃದ್ಧಿಯಲ್ಲಿ ಮೈಸೂರು ಬ್ಯಾಂಕಿನ ಪಾತ್ರ ಬಹಳ ಮೆಚ್ಚುವಂತಹುದು—ಅಂದರೆ ತನ್ನ ಕಾರ್ಯಕ್ಷೇತ್ರವಾದ ಕರ್ನಾಟಕದಲ್ಲಿ.

1968ರಿಂದ ಈ ಕ್ಷೇತ್ರದಲ್ಲಿ ಇದು ಸಾಲ ಕೊಡುತ್ತಾ ಬಂದಿದೆ. ಬಹಳ ಸಣ್ಣದಾಗಿ ಆರಂಭಿಸಿದರೂ 1968ರ ಕೊನೆಯ ವೇಳೆಗೆ ರೂ. 298 ಲಕ್ಷ ಸಾಲ ನೀಡಿತ್ತು. ಇದು 1981ರ ಕೊನೆಗೆ ರೂ. 51.90 ಕೋಟಿ ಆಯಿತು. ಹನ್ನೆರಡು ವರ್ಷಗಳಲ್ಲಿ 18 ಪಟ್ಟು ಜಾಸ್ತಿ. ಇದು ಬ್ಯಾಂಕಿನ ಒಟ್ಟು ಸಾಲದ ಪ್ರತಿಶತ 20.85. ಸಾಲಗಾರರ ಸಂಖ್ಯೆ 1.5 ಲಕ್ಷ. ಇದು ಒಟ್ಟು ಸಾಲಗಾರರ ಸಂಖ್ಯೆಯಾದ 3.00 ಲಕ್ಷದಲ್ಲಿ ಪ್ರತಿಶತ 50. ಇಷ್ಟೊಂದು ಸಾಧಿಸಿದ್ದರೂ ಬ್ಯಾಂಕಿಗೆ ಈ ದಿಸೆಯಲ್ಲಿ ಆತ್ಮತೃಪ್ತಿಯೇನೂ ಆಗಲಿಲ್ಲ.

ಬ್ಯಾಂಕು ಅಗಾಧವಾದ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ಬೆಳೆ ಸಾಲಗಳಿಂದ ಹಿಡಿದು ಎಲ್ಲಾ ರೀತಿಯ ಅವಧಿ ಸಾಲಗಳನ್ನೂ ಕೊಡಲಾಗುತ್ತದೆ. ಕಾಫಿ, ಏಲಕ್ಕಿ ತೆಂಗು, ಆಹಾರಧಾನ್ಯ ಅಥವಾ ನಗದು ಬೆಳೆ ಈ ರೀತಿ ತಾರತಮ್ಯವಿಲ್ಲದೆ ಎಲ್ಲಕ್ಕೂ ಸಾಲ. ತರಿ ಜಮೀನು ಇರಲಿ, ಖುಷ್ಕಿ ಜಮೀನು ಇರಲಿ, ಸಾಲ ನೀಡಿಕೆ. ಪ್ರಾಚೀನ ಬೇಸಾಯ ಅಥವಾ ಆಧುನಿಕ ಪದ್ಧತಿ ಬೇಸಾಯ—ಹೀಗೆ ಬ್ಯಾಂಕು ಎಲ್ಲಕ್ಕೂ ಸಾಲ ನೀಡಿದೆ.

ಆಯಾ ಪ್ರದೇಶಗಳಲ್ಲಿ ಅನುಕೂಲವಾಗುವಂತೆ ಹಲವಾರು ಯೋಜನೆಗಳು ಇವೆ. ಎಲ್ಲಾ ರೀತಿಯ ಸಾಲ ನೀಡಿಕೆ, ಉದಾಹರಣೆಗೆ ಉತ್ಪಾದನೆಗಾಗಿ, ಹೊಸ ಬಾವಿ, ಪಂಪ್ ಸೆಟ್ಟು, ಟ್ರಾಕ್ಟರು, ಎತ್ತುಗಾಡಿ, ಕೋಳಿ ಸಾಕಾಣಿಕೆಗಳಿಗಾಗಿ ಸಾಲಗಳು, ಬೆಳೆ ಸಾಲ, ಇತ್ಯಾದಿ.

ಕೃಷಿ ಅಭಿವೃದ್ಧಿ ಶಾಖೆಗಳು: ಕೃಷಿ ಅಭಿವೃದ್ಧಿಗೆ ವಿಶೇಷವಾಗಿ ಹತ್ತು ಕೇಂದ್ರಗಳಲ್ಲಿ ಪ್ರತ್ಯೇಕ ಶಾಖೆಗಳನ್ನು ತೆರೆದಿದೆ. ಭಾರತೀಯ ರಿಸರ್ವ್ ಬ್ಯಾಂಕಿನ ಅನುಮತಿ ಪಡೆದು ಇನ್ನೂ ಹೆಚ್ಚಿನ ಶಾಖೆಗಳನ್ನು ತೆರೆಯುವ ದೃಷ್ಟಿ ಇದೆ.

ಕೃಷಿ ಬ್ಯಾಂಕಿಂಗ್ ವಿಭಾಗಗಳು: ಇಲ್ಲಿ ಕೃಷಿ ಅಭಿವೃದ್ಧಿಗೆ ಹೆಚ್ಚು ಬೇಡಿಕೆ ಮತ್ತು ಕೃಷಿ ಅಭಿವೃದ್ಧಿ ಶಾಖೆಯ ಆವಶ್ಯಕತೆ ಇದ್ದಲ್ಲಿ ಈ ವಿಭಾಗಗಳನ್ನು ತೆರೆಯಲಾಯಿತು. ಪ್ರತಿಯೊಂದೂ 25ರಿಂದ 30 ಹಳ್ಳಿಗಳನ್ನು ದತ್ತು ತೆಗೆದುಕೊಂಡು ಅದರ ಸಮಗ್ರ ಅಭಿವೃದ್ಧಿಗೆ ಪ್ರಯತ್ನಿಸುತ್ತಿದೆ.

ಒಟ್ಟು ಶಾಖೆಗಳಲ್ಲಿ ಪ್ರತಿಶತ 70ರಷ್ಟು ಗ್ರಾಮಾಂತರ ಮತ್ತು ಸಣ್ಣ ಪಟ್ಟಣಗಳಲ್ಲಿ ಇವೆ. ಆದುದರಿಂದ ಸ್ವಾಭಾವಿಕವಾಗಿ ಕೃಷಿ ಸಾಲಕ್ಕೆ ಈ ಬ್ಯಾಂಕಿನ ಕೊಡುಗೆ ಹೆಚ್ಚು, ಈ ಒಟ್ಟು ಶಾಖೆಗಳು 400 ಹಳ್ಳಿಗಳನ್ನು ದತ್ತು ತೆಗೆದುಕೊಂಡು ನವೋನ್ಮೇಷ ಬ್ಯಾಂಕಿಂಗ್ ಮುಖೇನ ಅನೇಕಾನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ಅದರಲ್ಲಿ 'ಗ್ರಾಮೋದಯ' ಯೋಜನೆಯೂ ಒಂದು.

ಸಹಕಾರ ಸಂಘಗಳಿಗೆ ಬ್ಯಾಂಕು ನೀಡಿರುವ ಸಾಲ ಬಹಳ ಪ್ರಮುಖವಾದುದು. ಇಡೀ ದೇಶದಲ್ಲಿಯೇ ಸಾಲದ ಮೊತ್ತ, ಸಂಘಗಳ ಸಂಖ್ಯೆ ಮತ್ತು ಸಾಲಗಾರರ ಸಂಖ್ಯೆಗಳನ್ನು ಗಮನದಲ್ಲಿ ತಂದುಕೊಂಡರೆ ವಾಣಿಜ್ಯ ಬ್ಯಾಂಕುಗಳ ಪೈಕಿ ಮೊದಲ ಸ್ಥಾನ ಮೈಸೂರು ಬ್ಯಾಂಕಿಗೆ, ಮತ್ತು ಸಹಕಾರ ಕ್ಷೇತ್ರದಲ್ಲಿ ಸಾಲ ನೀಡಿಕೆಯನ್ನು ಗಮನದಲ್ಲಿಟ್ಟುಕೊಂಡರೆ ಮೊದಲು ಈ ದಿಸೆಯಲ್ಲಿ ಸಾಲ ನೀಡಿದ್ದು ಕೂಡ ಮೈಸೂರು ಬ್ಯಾಂಕು.

ಕಾವೇರಿ ಗ್ರಾಮೀಣ ಬ್ಯಾಂಕ್: ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಅಧಿನಿಯಮ 1976ರ ಪ್ರಕಾರ ಮೈಸೂರು ಮತ್ತು ಹಾಸನ ಜಿಲ್ಲೆಗಳ ಪರಿಮಿತಿಯೊಳಗೆ ಕಾವೇರಿ ಗ್ರಾಮೀಣ ಬ್ಯಾಂಕನ್ನು ತೆರೆಯಲಾಯಿತು. ಸಾಲದ ಮೊತ್ತ ರೂ. 680 ಲಕ್ಷ. ಇದನ್ನು ಪಡೆದ ದುರ್ಬಲ ಮತ್ತು ಅತಿ ಸಣ್ಣ ರೈತರ ಸಂಖ್ಯೆ 5,000.

ಹೀಗೆ ಮೈಸೂರು ಬ್ಯಾಂಕು ಸಹ ಕೃಷಿ ಅಭಿವೃದ್ಧಿಗೆ ಗಮನಾರ್ಹವಾದ ಕೊಡುಗೆಯನ್ನು ನೀಡಿದೆ.

# ಸುದ್ದಿ ಸಾರ

ಸಾ. ಅ. ಮಂಜುನಾಥ

### ಐದು ಪೈಸೆ ನಾಣ್ಯ ತಯಾರಿಕೆ ನಿಲುಗಡೆ?

ಐದು ಪೈಸೆಯ ನಾಣ್ಯ ತಯಾರಿಕೆಗೆ ಹತ್ತು ಪೈಸೆಗೂ ಹೆಚ್ಚು ವೆಚ್ಚವಾಗುವುದರಿಂದ ಇದರ ತಯಾರಿಕೆಯನ್ನು ನಿಲ್ಲಿಸಲು ಕೇಂದ್ರ ಸರಕಾರದ ಅನುಮತಿಯನ್ನು ಕೋರಲಾಗಿದೆಯೆಂದು ನಾಸಿಕ್‌ನ ಟಂಕಸಾಲೆಯ ಅಧಿಕಾರಿಗಳು ತಿಳಿಸಿದ್ದಾರೆ. ಈಗ ಎರಡು ರೂಪಾಯಿ ಮೌಲ್ಯದ ನಾಣ್ಯಗಳ ತಯಾರಿಕೆಯಲ್ಲಿ ನಿರತವಾಗಿರುವ ಟಂಕಸಾಲೆ ಶೀಘ್ರವೇ ಇಪ್ಪತ್ತು ಪೈಸೆಯ ಹೊಸ ನಾಣ್ಯಗಳನ್ನು ತಯಾರಿಸಲಿದೆ ಎಂದೂ ಅವರು ಹೇಳಿದ್ದಾರೆ.

### ಅಂಗವಿಕಲರಿಗೆ ಭಿನ್ನಕ ಬಡ್ಡಿ ದರದಲ್ಲಿ ಮುಂಗಡಗಳು

ವಾಣಿಜ್ಯ ಬ್ಯಾಂಕುಗಳು ವರಮಾನಪೂರ್ಣ ಉದ್ಯೋಗಗಳಲ್ಲಿರುವ ಅಂಗವಿಕಲರಿಗೆ ಕೃತಕ ತೋಳುಗಳು, ಶ್ರವಣ ಸಾಧನಗಳು, ಗಾಲಿ ಕುರ್ಚಿಗಳು ಮುಂತಾದುವನ್ನು ಕೊಳ್ಳುವ ಸಲುವಾಗಿ ತಲಾ ರೂ. 2,500ರ ಗರಿಷ್ಠ ಮೊತ್ತದ ವರೆಗೆ ಭಿನ್ನಕ ಬಡ್ಡಿ ದರದ ಸಾಲ ಯೋಜನೆಯಲ್ಲಿ ಹಣಕಾಸಿನ ನೆರವನ್ನು ನೀಡಬಹುದಾಗಿದೆ. ಈ ನೆರವನ್ನು ಪಡೆಯಲು ಭಿನ್ನಕ ಬಡ್ಡಿ ದರ ಸಾಲ ಯೋಜನೆಯ ಎಲ್ಲ ಷರತ್ತುಗಳೂ ಪೂರೈಕೆಯಾಗಿರಬೇಕು ಮತ್ತು ಉತ್ಪಾದಕ ಚಟುವಟಿಕೆಗಳಿಗೆ ಮತ್ತು ಸ್ವೋದ್ಯೋಗ ಪ್ರಯತ್ನಗಳಿಗೆ ನೀಡಲಾಗಿರುವ ಮುಂಗಡಗಳೊಡನೆ ಈ ನೆರವನ್ನು ನೀಡಲಾಗುವುದು.

### ಪಾಟ್ನಾ ಮತ್ತು ಭುವನೇಶ್ವರಗಳಲ್ಲಿ ವಿನಿಮಯ ಹತೋಟಿ ಇಲಾಖೆಯ ಕಚೇರಿಗಳು

ಇದುವರೆಗೆ ವಿದೇಶ ಪ್ರವಾಸಕ್ಕೆ ಸಂಬಂಧಿಸಿದ ಸೀಮಿತ ವ್ಯವಹಾರಗಳನ್ನು ನಿಯಂತ್ರಿಸುತ್ತಿದ್ದ ಪಾಟ್ನಾ ಮತ್ತು ಭುವನೇಶ್ವರಗಳಲ್ಲಿನ ರಿಸರ್ವ್ ಬ್ಯಾಂಕ್ ವಿನಿಮಯ ಹತೋಟಿ ಇಲಾಖೆಯ ಸೆಲ್‌ಗಳನ್ನು ಈಗ ಮೇಲ್ದರ್ಜೆಗೇರಿಸಿ ಪೂರ್ಣಪ್ರಮಾಣದ ವಿನಿಮಯ ಹತೋಟಿ ಇಲಾಖೆ ಕಚೇರಿಗಳನ್ನಾಗಿ ಪರಿವರ್ತಿಸಲಾಗಿದೆ. ಇದರಿಂದಾಗಿ ಬಿಹಾರ ಮತ್ತು ಒರಿಸ್ಸಾ ರಾಜ್ಯಗಳ ಎಲ್ಲ ವಿದೇಶೀ ವಿನಿಮಯ ವ್ಯವಹಾರಗಳನ್ನೂ ಈ ಕಚೇರಿಗಳು ಇನ್ನು ಮುಂದೆ ನಿಯಂತ್ರಿಸುತ್ತವೆ.

### ಬ್ಯಾಂಕುಗಳು ಮತ್ತು ಹೊಸ 20 ಅಂಶಗಳ ಕಾರ್ಯಕ್ರಮ

ಹೊಸ ಇಪ್ಪತ್ತು ಅಂಶಗಳ ಕಾರ್ಯಕ್ರಮದ ಪರಿಣಾಮಕಾರಿ ಅನುಷ್ಠಾನದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯ ಕರ್ತವ್ಯಗಳನ್ನು ಗುರುತಿಸಲು ರಿಸರ್ವ್ ಬ್ಯಾಂಕ್ ತನ್ನ ಉಪನಿಯಂತ್ರಕರಾದ (ಡೆಪ್ಯುಟಿ ಗವರ್ನರ್) ಶ್ರೀ ಅಮಿತಾಬ ಘೋಷ್‌ರವರ ಅಧ್ಯಕ್ಷತೆಯಲ್ಲಿ ಕಾರ್ಯ ತಂಡವೊಂದನ್ನು ರಚಿಸಿದೆ. ಈ ತಂಡದ ಇತರ ಕಾರ್ಯಗಳೆಂದರೆ:

i ಆದ್ಯತಾ ಕ್ಷೇತ್ರಗಳಲ್ಲಿನ ಗುರಿ ಮತ್ತು ಉಪಗುರಿಗಳನ್ನು, ವಿಶೇಷವಾಗಿ ದುರ್ಬಲ ವರ್ಗದ ಆವಶ್ಯಕತೆಗಳಿಗೆ ಸಂಬಂಧಿಸಿದಂತೆ, ಪುನರ್ವಿಮರ್ಶಿಸುವುದು,

ii ಆದ್ಯತಾ ಕ್ಷೇತ್ರಗಳಲ್ಲಿನ ಅರ್ಥ ವಿವರಣೆಗಳಲ್ಲಿ ಮಾರ್ಪಾಟು ಮಾಡಲು ಇರುವ ಅವಕಾಶಗಳನ್ನು ಪರೀಕ್ಷಿಸುವುದು,

iii ಹೊಸ ಇಪ್ಪತ್ತು ಅಂಶಗಳ ಕಾರ್ಯಕ್ರಮಕ್ಕೆ ಉದರಿ ಪೂರೈಕೆ ಕುರಿತಾದ ವರದಿ ಮತ್ತು ಮಾರ್ಗದರ್ಶನ ವ್ಯವಸ್ಥೆಯ ಪುನರ್ವಿಮರ್ಶೆ.

### ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟ್‌ಗಳಲ್ಲಿ ಅನಿವಾಸಿಗಳಿಂದ ವಿನಿಯೋಜನೆ

ಅನಿವಾಸಿ ಭಾರತೀಯರು ಈಗ ರಾಷ್ಟ್ರೀಯ ಉಳಿತಾಯ ಪತ್ರಗಳಲ್ಲಿ (ಸರ್ಟಿಫಿಕೇಟ್) ಧಾರಾಳವಾಗಿ ಹಣವನ್ನು ವಿನಿಯೋಜಿಸಬಹುದಾಗಿದೆ. ಅವರ ವಿನಿಯೋಜನೆಗಳಿಗೆ ಸಂಪತ್ತು ತೆರಿಗೆ, ವರಮಾನ ತೆರಿಗೆ ಮತ್ತು ಕೊಡುಗೆ ತೆರಿಗೆಗಳಿಂದ ವಿನಾಯಿತಿ ದೊರೆಯುತ್ತದೆ. ಅನಿವಾಸಿ ಭಾರತೀಯರಿಂದ ಹೆಚ್ಚು ವಿನಿಯೋಜನೆಯನ್ನು ಆಕರ್ಷಿಸಲು ಪ್ರೋತ್ಸಾಹಕವಾಗಿ ಈ ವಿನಾಯಿತಿಯನ್ನು ನೀಡಲಾಗಿದೆ.

### ರಿಸರ್ವ್ ಬ್ಯಾಂಕಿಗೆ ಹೊಸ ಗವರ್ನರ್

ಶ್ರೀ ಮನಮೋಹನ್ ಸಿಂಗ್ ಅವರು ರಿಸರ್ವ್ ಬ್ಯಾಂಕಿನ ನಿಯಂತ್ರಕರಾಗಿ (ಗವರ್ನರ್) ಅಧಿಕಾರ ಸ್ವೀಕರಿಸಿದ್ದಾರೆ. ನಿವೃತ್ತ ನಿಯಂತ್ರಕ ಡಾ. ಐ. ಜಿ. ಪಟೇಲ್

ಅವರಿಂದ ಇವರು ಅಧಿಕಾರ ವಹಿಸಿಕೊಂಡಿದ್ದಾರೆ. ಶ್ರೀ ಸಿಂಗ್ ಅವರು ಹಿಂದೆ ಕೇಂದ್ರ ಹಣಕಾಸು ಖಾತೆಯ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದವರು.

### ಶಿಕ್ಷಕರು ಬೈಸಿಕಲ್ ಕೊಳ್ಳಲು ಬ್ಯಾಂಕುಗಳ ನೆರವು

ಗ್ರಾಮೀಣ ಮತ್ತು ಅರೆಪಟ್ಟಣ ಪ್ರದೇಶಗಳ ಶಿಕ್ಷಕರು ತಮ್ಮ ಕಾರ್ಯಕ್ಷೇತ್ರವನ್ನು ತಲುಪಲು ಪಡುತ್ತಿರುವ ಬವಣೆಗಳನ್ನು ಕಡಿಮೆಗೊಳಿಸಲು ವಾಣಿಜ್ಯ ಬ್ಯಾಂಕುಗಳು ಅವರಿಗೆ ಬೈಸಿಕಲ್ ಕೊಳ್ಳಲು ಹಣ ಸಹಾಯ ನೀಡಲಿವೆ. ಸಾಲದ ಮೊತ್ತ ರೂ. 750 ಅಥವಾ ಬೈಸಿಕಲ್‌ನ ಬೆಲೆಯ ಶೇ. 90ರಷ್ಟು ಆಗಿರುತ್ತದೆ. ಹರಿಜನ-ಗಿರಿಜನ ವರ್ಗಗಳಿಗೆ ಸೇರಿದ ಶಿಕ್ಷಕರಿಗೆ ಬೈಸಿಕಲ್‌ನ ಪೂರ್ಣ ಮೌಲ್ಯವನ್ನು ಸಾಲವಾಗಿ ನೀಡಬಹುದಾಗಿದೆ. ಸಾಲವನ್ನು ಮೂರು ವರ್ಷಗಳೊಳಗೆ ಸೂಕ್ತ ಮಾಸಿಕ ಕಂತುಗಳಲ್ಲಿ ಮರು ಪಾವತಿ ಮಾಡಬಹುದು. ಬಡ್ಡಿ ದರ ಶೇ. 15. ಕಂತುಗಳನ್ನು ಶಿಕ್ಷಕರ ಸಂಬಳದಲ್ಲೇ ಮುರಿದುಕೊಳ್ಳಬಹುದಾಗಿದೆ.

### ಸಗಟು ಬೆಲೆ ಸೂಚ್ಯಂಕ ಪರಿಷ್ಕರಣಕ್ಕಾಗಿ ಕಾರ್ಯತಂಡ

ಕೇಂದ್ರ ಸರಕಾರ ಸಗಟು ಸೂಚ್ಯಂಕವನ್ನು ಪರಿಷ್ಕರಿಸಲು ಹದಿನೈದು ಮಂದಿಯ ಕಾರ್ಯತಂಡವೊಂದನ್ನು ನೇಮಿಸಿದೆ. ರಿಸರ್ವ್ ಬ್ಯಾಂಕಿನ ಉಪನಿಯಂತ್ರಕರಾದ ಡಾ. ಸಿ. ರಂಗರಾಜನ್ ಈ ತಂಡದ ಅಧ್ಯಕ್ಷರು.

### ಹಣ ಪರಿವರ್ತಕರಿಂದ ವಿದೇಶಿ ಕರೆನ್ಸಿಯ ಮಾರಾಟ

ಪೂರ್ಣ ಪ್ರಮಾಣದ ಹಣ ಪರಿವರ್ತಕರು 1982ರ ಫೆಬ್ರುವರಿ 8ರಿಂದ ಒಂದು ವರ್ಷ ಕಾಲ ವಿದೇಶ ಪ್ರವಾಸ ಮತ್ತು ನೆರೆ ದೇಶಗಳ ಪ್ರವಾಸ (ಪರಿಷ್ಕೃತ) ಯೋಜನೆಯಡಿ ರಿಸರ್ವ್ ಬ್ಯಾಂಕ್ ನೀಡಿದ ಸೂಚನೆಗಳ ಅನುಸಾರ ಅರ್ಹ ವ್ಯಕ್ತಿಗಳಿಗೆ ವಿದೇಶೀ ವಿನಿಮಯವನ್ನು ಕರೆನ್ಸಿ ನೋಟುಗಳು ಮತ್ತು ನಾಣ್ಯಗಳ ರೂಪದಲ್ಲಿ ಮಾರಾಟ ಮಾಡಬಹುದಾಗಿದೆ. ಪ್ರವಾಸಿಯೊಬ್ಬನಿಗೆ ಮಾರಾಟ ಮಾಡಲಾದ ಅಂತಹ ಮೊಬಲಗು ಸಂಬಂಧಿಸಿದ ವಿದೇಶ ಪ್ರವಾಸ ಯೋಜನೆ / ನೆರೆ ದೇಶಗಳ ಪ್ರವಾಸ ಯೋಜನೆಯ ಅಡಿ ಇರುವ ಅರ್ಹತೆಯಾದ 500 ಹಾಗೂ 250 ಡಾಲರ್‌ಗಳನ್ನು ಮೀರಿರಕೂಡದು.

### ಖುಷ್ಕಿ ಬೇಸಾಯಕ್ಕೆ ರಾಷ್ಟ್ರೀಯ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ನೆರವು

ದೇಶದ ವಿವಿಧ ಭಾಗಗಳಲ್ಲಿ ಒಣ ಬೇಸಾಯವನ್ನು ಅಭಿವೃದ್ಧಿಗೊಳಿಸಲು ನಿರ್ದಿಷ್ಟ ಯೋಜನೆಗಳನ್ನು ತಯಾರಿಸಲು ರಾಷ್ಟ್ರೀಯ ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ (ನಬಾರ್ಡ್) ಮುಂದಾಗಿದೆ.

# ವಿದೇಶಗಳಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಮತ್ತು ಆರ್ಥಿಕ ಆಡಳಿತ-೨

## ಆಸ್ಟ್ರಿಯದಲ್ಲಿ

ಸಾ. ಅ. ಮಂಜುನಾಥ

### ಸ್ವರೂಪ

ಆಸ್ಟ್ರಿಯ ಮಧ್ಯ ಯೂರೋಪಿನ ಒಂದು ದೇಶ. ಇದು ಸ್ವಿಟ್ಸರ್ಲೆಂಡ್, ಪಶ್ಚಿಮ ಜರ್ಮನಿ, ಚೆಕೊಸ್ಲೊವಾಕಿಯ, ಹಂಗರಿ, ಯೂಗೊಸ್ಲಾವಿಯ ಮತ್ತು ಇಟಲಿ ದೇಶಗಳಿಂದ ಸುತ್ತುವರಿಯಲ್ಪಟ್ಟಿದೆ. ಆಸ್ಟ್ರಿಯದ ಬ್ಯಾಂಕಿಂಗ್ ವ್ಯವಸ್ಥೆ ಸಾಮಾನ್ಯವಾಗಿ ಯೂರೋಪಿಯನ್ ಮಾದರಿಯದಾಗಿದೆ. ಅದು ವಿಶೇಷವಾಗಿ ಪಶ್ಚಿಮ ಜರ್ಮನಿ ವ್ಯವಸ್ಥೆಯನ್ನು ಹೋಲುತ್ತದೆ.

### ಹರಹು

ಆಸ್ಟ್ರಿಯದಲ್ಲಿ ವಾಣಿಜ್ಯ ವಲಯದಲ್ಲಿ 40 ಕೂಡು ಬಂಡವಾಳ ಬ್ಯಾಂಕುಗಳು ಮತ್ತು 10 ಖಾಸಗಿ ಒಡೆತನದ ಬ್ಯಾಂಕುಗಳು ಇವೆ. ಉಳಿತಾಯ ವಲಯದಲ್ಲಿ 143 ಸಂಸ್ಥೆಗಳು ಕೆಲಸ ಮಾಡುತ್ತಿವೆ. ಸಹಕಾರಿ ವಲಯದಲ್ಲಿ 1,218 ಗ್ರಾಮೀಣ ಸಹಕಾರ ಸಂಘಗಳು ಮತ್ತು 142 ಸಣ್ಣ ಪ್ರಮಾಣದ ವಾಣಿಜ್ಯ ಸಹಕಾರ ಸಂಸ್ಥೆಗಳು ಇವೆ.

### ಕೇಂದ್ರ ಬ್ಯಾಂಕು

ಆಸ್ಟ್ರಿಯದ ಕೇಂದ್ರೀಯ ಬ್ಯಾಂಕು ದಿ ನ್ಯಾಷನಲ್ ಬ್ಯಾಂಕ್ ಎಂಬುದು. ಇದು ಸ್ವಾಯತ್ತ ಸಂಸ್ಥೆಯಾಗಿದ್ದರೂ, ಸರಕಾರದ ಆರ್ಥಿಕ ನೀತಿಗಳನ್ನು ಜಾರಿಗೆ ತರುವ ಹೊಣೆ ಇದರದು. ಇದು ವಿಧಿಬದ್ಧವಾಗಿ ಮಾಡಬೇಕಾದ ಕರ್ತವ್ಯಗಳೆಂದರೆ:

1 ದೇಶದ ಹಣದ ಆಂತರಿಕ ಮೌಲ್ಯವನ್ನು ಕಾಯ್ದುಕೊಳ್ಳುವುದು,

2 ದೇಶದ ಹಣದ ಬಾಹ್ಯ ಮೌಲ್ಯವನ್ನು ನಿರ್ಧರಿಸುವುದು ಮತ್ತು

3 ಉದರಿ ವಿಸ್ತರಣೆಯನ್ನು ನಿಯಂತ್ರಿಸುವುದು.

ಅ) ಕಾರ್ಯ ವಿಧಾನ: ವಿನಿಮಯ ದರದ ಬಗ್ಗೆ ನೀತಿಯನ್ನು ದೇಶದ ಸರಕಾರದ ಜತೆ ಸಮಾಲೋಚನೆ ನಡೆಸಿದ ಅನಂತರ ನಿರ್ಧರಿಸಲಾಗುವುದು. ಆದರೆ ಕೇಂದ್ರೀಯ ಬ್ಯಾಂಕು ದೇಶದ ಪಾರ್ಲಿಮೆಂಟಿಗೆ ಯಾವ ರೀತಿಯ ಜವಾಬ್ದಾರಿಯನ್ನೂ ಹೊಂದಿರುವುದಿಲ್ಲ. ಕೇಂದ್ರೀಯ ಬ್ಯಾಂಕು ಹಾಗೂ ಸರಕಾರದ ನಡುವೆ ಉದ್ಯೋಗಿಗಳ ಕೊಡುಕೊಳುವಿಕೆಯ ವ್ಯವಹಾರಕ್ಕೆ ಅವಕಾಶವಿದೆ.

ಆ) ಬ್ಯಾಂಕಿನ ಬಂಡವಾಳ: ಕೇಂದ್ರೀಯ ಬ್ಯಾಂಕಿನ ಬಂಡವಾಳದಲ್ಲಿ ಶೇ. 50ರಷ್ಟು ದೇಶದ ಸರಕಾರದ್ದು. ಉಳಿದ ಶೇ. 50 ಸರಕಾರದಿಂದ ಅಧಿಕೃತರಾದ ವ್ಯಕ್ತಿ ಹಾಗೂ ಸಂಸ್ಥೆಗಳದು.

ಇ) ಬ್ಯಾಂಕಿನ ಆಡಳಿತ ವಿಧಾನ: ಬ್ಯಾಂಕಿಗೆ ಒಬ್ಬ ಅಧ್ಯಕ್ಷನಿದ್ದು ಈತನನ್ನು 5 ವರ್ಷಗಳ ಅವಧಿಗೆ ದೇಶದ ಅಧ್ಯಕ್ಷರು ನೇಮಿಸುತ್ತಾರೆ. ಈ ಅವಧಿಯ ಅನಂತರ ಈತ ಮರು ನೇಮಕ ಹೊಂದಬಹುದು. ಇಬ್ಬರು ಉಪಾಧ್ಯಕ್ಷರನ್ನೂ ಆಡಳಿತ ಮಂಡಳಿಗೆ 5 ಜನ ನಿರ್ದೇಶಕರನ್ನೂ ಇದೇ ರೀತಿಯಲ್ಲಿ ದೇಶದ ಅಧ್ಯಕ್ಷರು ನೇಮಿಸುತ್ತಾರೆ.

ಆಡಳಿತ ಮಂಡಳಿಯಲ್ಲಿ ಉಳಿದ 6 ಜನ ನಿರ್ದೇಶಕರನ್ನು ಷೇರುದಾರರ ಮಹಾಸಭೆ 5 ವರ್ಷಗಳಿಗಾಗಿ ಚುನಾಯಿಸುತ್ತದೆ. ಈ ಅವಧಿಯ ಅನಂತರ ಅವರು ಪುನಃ ಚುನಾವಣೆಯಲ್ಲಿ ಸ್ಪರ್ಧಿಸಬಹುದಾಗಿದೆ.

ಕೇಂದ್ರೀಯ ಬ್ಯಾಂಕಿನ ನಿರ್ದೇಶಕರು ಅರ್ಥಶಾಸ್ತ್ರ ಪ್ರವೀಣರಾಗಲಿ ವಾಣಿಜ್ಯ ವೃತ್ತಿಯಲ್ಲಿ ಹೆಸರಾಂತವರಾಗಲಿ ಆಗಿರಬೇಕಾದುದು ಅತ್ಯವಶ್ಯ. ಆಡಳಿತ ಮಂಡಳಿಯಲ್ಲಿ ಬ್ಯಾಂಕಿಂಗ್ ಸಂಸ್ಥೆಗಳು, ಉಳಿತಾಯ ಬ್ಯಾಂಕುಗಳು, ಕೈಗಾರಿಕೆ, ವಾಣಿಜ್ಯ ಮತ್ತು ಸಣ್ಣ ವ್ಯಾಪಾರ, ವ್ಯವಸಾಯ

ಈ ಕ್ಷೇತ್ರಗಳಿಂದ ಕನಿಷ್ಠ ಒಬ್ಬೊಬ್ಬ ಪ್ರತಿನಿಧಿ ಇರಬೇಕಾಗುತ್ತದೆ. ಅಲ್ಲದೆ ನೌಕರ ವರ್ಗ ಮತ್ತು ಕಾರ್ಮಿಕ ವರ್ಗದಿಂದಲೂ ತಲಾ ಒಬ್ಬ ಪ್ರತಿನಿಧಿ ಆಡಳಿತ ಮಂಡಳಿಯಲ್ಲಿ ಇರಬೇಕೆಂಬ ಕಡ್ಡಾಯವಿದೆ.

ಆಡಳಿತ ಮಂಡಳಿ ಬ್ಯಾಂಕಿನ ಆಡಳಿತದ ಮೇಲ್ವಿಚಾರಣೆ ವಹಿಸಿ ಮಾರ್ಗದರ್ಶನ ನೀಡುತ್ತದೆ. ದೈನಂದಿನ ಕರ್ತವ್ಯ ನಿರ್ವಹಣೆಗಾಗಿ 4ರಿಂದ 6 ಜನ ಸದಸ್ಯರಿರುವ ವ್ಯವಸ್ಥಾಪಕ ಮಂಡಳಿಯೊಂದು ಇರುತ್ತದೆ. ಇದು ಆಡಳಿತ ಮಂಡಳಿಗೆ ಜವಾಬ್ದಾರಿಯಾಗಿರುತ್ತದೆ. ಆಡಳಿತ ಮಂಡಳಿಯ ಅಧ್ಯಕ್ಷರು ವ್ಯವಸ್ಥಾಪಕ ಮಂಡಳಿಯ ಸಭೆಗಳಲ್ಲಿ ಭಾಗವಹಿಸಿ ಮತ ಚಲಾಯಿಸುವ ಅಧಿಕಾರ ಹೊಂದಿರುತ್ತಾರೆ.

**ಪ್ರಸಕ್ತ ಸ್ಥಿತಿ**

1979ರಲ್ಲಿ ಜಾರಿಗೆ ತರಲಾದ ಬ್ಯಾಂಕಿಂಗ್ ಅಧಿನಿಯಮದ ಪ್ರಕಾರ ಆಸ್ಟ್ರಿಯದ ಎಲ್ಲ ಬ್ಯಾಂಕುಗಳೂ ಎಲ್ಲ ರೀತಿಯ ಬ್ಯಾಂಕಿಂಗ್ ವ್ಯವಹಾರಗಳನ್ನೂ ನಡೆಸಬಹುದು. ಶಾಖಾ ವಿಸ್ತರಣೆಯ ಬಗ್ಗೆ ಆಗಲಿ ಡಿಬೆಂಚರುಗಳನ್ನು ಹೊರಡಿಸುವುದರ ಬಗ್ಗೆ ಆಗಲಿ ಯಾವ ಅಡೆತಡೆಯೂ ಇಲ್ಲ. ಇದರಿಂದಾಗಿ ಇಂದು ಅಲ್ಲಿ ಪ್ರತಿ 1,500 ಜನರಿಗೆ ಒಂದು ಬ್ಯಾಂಕ್ ಶಾಖೆ ಇದೆ. ಆಸ್ಟ್ರಿಯದ ವಾಣಿಜ್ಯ ಬ್ಯಾಂಕುಗಳಲ್ಲಿ ಅತಿ ದೊಡ್ಡ ಬ್ಯಾಂಕುಗಳೆಂದರೆ ಕ್ರೆಡಿಟಾನ್‌ಸ್ಟಾಲ್ಟ್ ಮತ್ತು ಲ್ಯಾಂಡರ್ ಬ್ಯಾಂಕ್. ಆಸ್ಟ್ರಿಯದ ನಾಣ್ಯ ಷಿಲಿಂಗ್. ಇದರ ಮೌಲ್ಯ ನಿರ್ಧಾರ ನೆರೆದೇಶವಾದ ಪಶ್ಚಿಮ ಜರ್ಮನಿಯ ನಾಣ್ಯವಾದ ಡ್ಯೂಷ್ ಮಾರ್ಕಿನೊಂದಿಗಿನ ಸಹ ಸಂಬಂಧವನ್ನು ಆಧರಿಸಿದೆ. ಆಸ್ಟ್ರಿಯದ ಹಣಕಾಸು ನೀತಿಗಳು—ಬಡ್ಡಿ ದರಗಳು, ದ್ರವತೆ, ಹಣ ಸರಬರಾಜು ವೃದ್ಧಿ ಇವು—ಈ ಸಹಸಂಬಂಧವನ್ನು ಆಧರಿಸಿಯೇ ರೂಪಿತವಾಗುತ್ತವೆ.



## ವಿದೇಶಿ ವಿನಿಮಯ ಕಾಪು

ಅಕ್ಟೋಬರ್ '೮೭ರ ಕೊನೆಯಲ್ಲಿ ಭಾರತದ ವಿದೇಶಿ ವಿನಿಮಯ ಕಾಪು (ಚಿನ್ನ ಮತ್ತು ವಿಶೇಷ ಡ್ರಾಯಿಂಗ್ ಹಕ್ಕುಗಳ ಹೊರತಾಗಿ) ರೂ. 3,153.48 ಕೋಟಿಯಷ್ಟಿತ್ತು.

## ಗ್ರಾಮೀಣ ಬ್ಯಾಂಕುಗಳು

೧೯೮೭ರಲ್ಲಿ ತೆರೆಯಬೇಕಾಗಿದ್ದ ೧೨೫ ಗ್ರಾಮೀಣ ಬ್ಯಾಂಕುಗಳ ಪೈಕಿ ಈಗ ೧೧೩ ಗ್ರಾಮೀಣ ಬ್ಯಾಂಕುಗಳು ತೆರೆಯಲ್ಪಟ್ಟವೆ.



# ಚೆಕ್ಕುಗಳು

ಬಿ. ಎಸ್. ಚಂದ್ರಶೇಖರ್

**ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ಮೈಸೂರಿನಲ್ಲಿ ಏಪ್ರಿಲ್ 6ರಿಂದ 9ರ ವರೆಗೆ ನಡೆದ ಬ್ಯಾಂಕಿಂಗ್ ಸಾಹಿತ್ಯ ಕಮ್ಮಟದಲ್ಲಿ ಸಾದರಪಡಿಸಿದ ಪ್ರಬಂಧಗಳ ಪೈಕಿ ಇನ್ನೊಂದು**

ಚೆಕ್ಕುಗಳ ಮೂಲಕ ಹಣ ಪಾವತಿ ಮಾಡುವುದು ಸಾಮಾನ್ಯವಾಗಿರುವ ಈ ಬ್ಯಾಂಕುಗಳ ಯುಗದಲ್ಲಿ ಚೆಕ್ಕಿನ ಮೂಲ ಅಕ್ಕಸಾಲಿಗರಿಂದ ರೂಪಿಸಲ್ಪಟ್ಟಿತ್ತೆಂಬುದು ಕುತೂಹಲಕಾರಿಯಾಗಿ ತೋರಬಹುದು.

ಲಂಡನ್ ಪಟ್ಟಣದ ಅಕ್ಕಸಾಲಿಗರು ಸಾರ್ವಜನಿಕರಿಂದ ಹಣವನ್ನು ಪಡೆದು ಅವರು ಅದನ್ನು ಕೇಳಿದಾಗ ಮರಳಿ ಕೊಡುತ್ತಿದ್ದರು. ಅವರಿಗೆ ವ್ಯವಹರ್ತೃಗಳು ಲಿಖಿತ ಅನುಮತಿ ಚೀಟಿಗಳ ಮೂಲಕ ತಾವು ಸೂಚಿಸಿದಷ್ಟು ಹಣವನ್ನು ಚೀಟಿಯಲ್ಲಿ ಹೆಸರನ್ನು ನಿರೂಪಿಸಿದವರಿಗೆ ಅಥವಾ ಅವರ ಅಪ್ಪಣೆ ಪಡೆದವರಿಗೆ ಅಥವಾ ಆ ಚೀಟಿಯನ್ನು ಹಾಜರುಪಡಿಸಿದವರಿಗೆ ಕೊಡಬಹುದೆಂದು ಸೂಚನೆ ಕೊಡುತ್ತಿದ್ದರು. ಆ ಅನುಮತಿ ಚೀಟಿಯ ಪರಿಷ್ಕೃತ ರೂಪವೇ ಈಗಿನ "ಚೆಕ್ಕು".

1780ರಲ್ಲಿ ಮೊಟ್ಟಮೊದಲಿಗೆ ಚೆಕ್ಕುಗಳು ಬಳಕೆಗೆ ಬಂದುವು ಎಂದು ತಿಳಿದುಬಂದಿದೆ. ಸರಳ ಭಾಷೆಯಲ್ಲಿ ಹೇಳಬೇಕಾದರೆ, ಚೆಕ್ಕು ಬ್ಯಾಂಕರನಿಗೆ ಗ್ರಾಹಕ ನೀಡಿದ ಒಂದು ಆದೇಶ. ಗ್ರಾಹಕನ ಖಾತೆಯಲ್ಲಿರುವ ಸಿಲ್ಕಿನ ಮಿತಿಯೊಳಗೆ ಗ್ರಾಹಕ ಚೆಕ್ಕಿನಲ್ಲಿ ಬರೆಯುವ ಮೊತ್ತವನ್ನು ಬ್ಯಾಂಕರ್ ಪಾವತಿ ಮಾಡಬೇಕು.

ಆದರೆ ಇಷ್ಟು ಸರಳವಾಗಿ ತೋರಿಬರುವ ಚೆಕ್ಕಿಗೆ ಕಾನೂನಿನಲ್ಲಿ ಒಂದು ತ್ರಿವಿಕ್ರಮ ಸ್ವರೂಪವೇ ಇದೆ. ಈ ಸ್ವರೂಪ 'ಭಾರತದ ಪರಕ್ರಾಮ್ಯ ಸಂಲೇಖಗಳ ಅಧಿನಿಯಮ, 1881'ರಲ್ಲಿ ವರ್ಣಿತವಾಗಿದೆ.

**ಚೆಕ್ಕಿನ ವ್ಯಾಖ್ಯೆ**

ಮೇಲೆ ಹೇಳಿದ ಅಧಿನಿಯಮದ 6ನೆಯ ಪ್ರಕರಣದಲ್ಲಿ, 'ಒಬ್ಬ ನಿಶ್ಚಿತ ಬ್ಯಾಂಕರನ ಮೇಲೆ ಬರೆಯಲಾದ, ಕೇಳಿದಾಗಲ್ಲದೆ ಅನ್ಯಥಾ ಪಾವತಿ ಮಾಡಬೇಕೆಂದು ಅಭಿವ್ಯಕ್ತವಾಗಿಲ್ಲದ ಹುಂಡಿಯೇ ಚೆಕ್ಕು' ಎಂದು ಚೆಕ್ಕಿನ ವ್ಯಾಖ್ಯೆಯನ್ನು ಕೊಡಲಾಗಿದೆ. ಇದೇ ಅಧಿನಿಯಮದ 5ನೆಯ ಪ್ರಕರಣದಲ್ಲಿ ಹುಂಡಿಯ ವ್ಯಾಖ್ಯೆಯನ್ನು ಹೀಗೆ ಕೊಡಲಾಗಿದೆ: 'ಒಬ್ಬ ನಿಶ್ಚಿತ ವ್ಯಕ್ತಿಗೆ ಅಥವಾ ಅವನ ಆದೇಶಕ್ಕೆ ಅಥವಾ ಸಂಲೇಖದ ವಾಹಕನಿಗೆ ಹಣದ ಒಂದು ನಿಶ್ಚಿತ ಮೊಬಲಗನ್ನು ಮಾತ್ರವೇ ಕೊಡಬೇಕೆಂದು ನಿರ್ದೇಶಿಸಿ ಅದನ್ನು ರಚಿಸಿದವನಿಂದ ಸಹಿಯಾದ ಬೇಷರತ್ ಆದೇಶವನ್ನು ಒಳಗೊಂಡ ಲಿಖಿತ ಸಂಲೇಖ.'

ಈ ಎರಡು ಪ್ರಕರಣಗಳನ್ನು ಸೇರಿಸಿದಾಗ ಚೆಕ್ಕಿನ ವ್ಯಾಖ್ಯೆ ಪೂರ್ಣವಾಗುತ್ತದೆ:

ಒಬ್ಬ ನಿಶ್ಚಿತ ಬ್ಯಾಂಕರನ ಮೇಲೆ ಬರೆಯಲಾಗಿದ್ದು ಅದರ ರಚಕನಿಂದ ಸಹಿ ಪಡೆದ ಮತ್ತು ಒಬ್ಬ ನಿಶ್ಚಿತ ವ್ಯಕ್ತಿಗೆ ಅಥವಾ ಅವನ ಆದೇಶಕ್ಕೆ ಅಥವಾ ಸಂಲೇಖದ ವಾಹಕನಿಗೆ ಹಣದ ಒಂದು ನಿಶ್ಚಿತ ಮೊಬಲಗನ್ನು ಕೇಳಿದಾಗಲ್ಲದೆ ಅನ್ಯಥಾ ಪಾವತಿ ಮಾಡಬೇಕೆಂದು ವ್ಯಕ್ತವಾಗಿಲ್ಲದ ಬೇಷರತ್ ಆದೇಶವನ್ನೊಳಗೊಂಡ ಲಿಖಿತ ಸಂಲೇಖ.

ಬ್ಯಾಂಕಿನ ಸಾಮಾನ್ಯ ಗ್ರಾಹಕನಿಗೆ ಅನುಕೂಲವಾಗುವಂತೆ ಚೆಕ್ಕಿನ ಬಗ್ಗೆ ಹಲವು ವಿವರಗಳ ಪರಿಚಯ ಮಾಡಿಕೊಡುವುದು ಈ ಲೇಖನದ ಉದ್ದೇಶ. ಆದ್ದರಿಂದ ಪರ

ಕ್ರಾಮ್ಯ ಸಂಲೇಖಗಳ ಅಧಿನಿಯಮದಲ್ಲಿನ (ನೆಗೋಷಿಯ ಬ್‌ಲ್ ಇನ್‌ಸ್ಟ್ರುಮೆಂಟ್ಸ್ ಆಕ್ಟ್) ವಿಧಿಗಳನ್ನು ಉಲ್ಲೇಖಿಸಿ ಅದರ ವಿವರಣೆಗಳನ್ನು ಕೊಡುತ್ತ ಹೋಗದೆ ಸರಳ ಭಾಷೆಯಲ್ಲಿ ಚೆಕ್ಕಿನ ಸ್ವರೂಪವನ್ನು ತಿಳಿಸಲು ಇಲ್ಲಿ ಪ್ರಯತ್ನಿಸಲಾಗಿದೆ:

1 ಚೆಕ್ಕು ಒಂದು ಲಿಖಿತ ಆದೇಶ.

2 ಚೆಕ್ಕನ್ನು ಒಂದು ನಿಶ್ಚಿತ ಬ್ಯಾಂಕರನ ಮೇಲೆ ಬರೆದಿರಬೇಕು.

3 ಆದೇಶ ಬೇಷರತ್ ಆಗಿರಬೇಕು. ಹಣ ಪಾವತಿ ಮಾಡುವಾಗ ಅದರ ಜತೆ ಇನ್ನೇನಾದರೂ ಮಾಡಬೇಕೆಂಬ ಷರತ್ತನ್ನು ಬ್ಯಾಂಕಿಗೆ ವಿಧಿಸಿದ್ದರೆ ಅದು 'ಚೆಕ್'ಆಗುವುದಿಲ್ಲ. ಉದಾ: ಪ್ರಾಪ್ತಿಕರ್ತನಿಂದ ಕಾಗದ ಪತ್ರಗಳನ್ನು ಪಡೆದು ಪಾವತಿ ಮಾಡಬೇಕು ಎಂದು ಸಂಲೇಖದಲ್ಲಿ ವಿಧಿಸಲಾಗಿದ್ದರೆ ಅದು ಷರತ್ತಿನಿಂದ ಕೂಡಿದ ಆದೇಶವಾಗುವುದರಿಂದ 'ಚೆಕ್' ಅಲ್ಲ.

4 ಪಾವತಿ ಮಾಡಬೇಕಾದ ಹಣ ನಿಶ್ಚಿತವಾಗಿರಬೇಕು.

5 ಚೆಕ್ಕಿನ ಮೇಲೆ ರಚಕನ ಸಹಿ ಇರಬೇಕು.

6 ಹಣವನ್ನು ಕೇಳಿದಾಗ ಮಾತ್ರ ಚೆಕ್ಕು ಪಾವತಿ ಯುಕ್ತವಾಗುತ್ತದೆ. ಚೆಕ್ಕಿನ ಮೇಲೆ 'ಕೇಳಿದಾಗ ಮಾತ್ರ' ಎಂಬ ಪದಗಳು ಇರದಿದ್ದರೂ ಈ ನಿಬಂಧನೆ ಇರುತ್ತದೆಂದು ಭಾವಿಸತಕ್ಕದ್ದು.

7 ಚೆಕ್ಕಿನ ಹಣ ನಿಶ್ಚಿತ ವ್ಯಕ್ತಿಗೆ (ಚೆಕ್ಕಿನಲ್ಲಿ ಹೆಸರಿಸಲ್ಪಡುವವನಿಗೆ) ಅಥವಾ ಅವನಿಂದ ಆದೇಶ ಪಡೆದ ವ್ಯಕ್ತಿಗೆ ಅಥವಾ ಚೆಕ್ಕಿನ ಧಾರಕನಿಗೆ ನೀಡಲಾಗಬೇಕು.

ಚೆಕ್ಕಿನ ನಮೂನೆಯೊಂದನ್ನು ನೋಡಿದರೆ ಮೇಲೆ ತಿಳಿಸಿದ ಹಲವು ವಿಷಯಗಳು ಸ್ಪಷ್ಟವಾಗುವುವು:

ಚೆಕ್ಕುಗಳ ಬಳಕೆಯಿಂದ ಹಲವು ಅನುಕೂಲಗಳುಂಟು. ಅವುಗಳಲ್ಲಿ ಮುಖ್ಯವಾದವು:

1 ಚೆಕ್ಕುಗಳನ್ನು ಯಾವುದೇ ಮೊತ್ತಕ್ಕೆ ಬರೆಯಬಹುದು ಮತ್ತು ಚೆಕ್ಕಿನ ಮೂಲಕ ಪಾವತಿ ಮಾಡಿದಾಗ ರಶೀತಿ ಪಡೆಯಲೇಬೇಕಾದ ಪ್ರಮೇಯವಿಲ್ಲ.

2 ರೇಖಣ ಮಾಡಲಾದ ಚೆಕ್ಕುಗಳು ಕಳೆದುಹೋದರೂ ನಷ್ಟವಾಗುವ ಸಂಭವ ಕಡಿಮೆ.

3 ಚೆಕ್ಕಿನ ಮೂಲಕ ಪಾವತಿ ಮಾಡುವುದು ನಗದಾಗಿ ಪಾವತಿ ಮಾಡುವುದಕ್ಕಿಂತ ಸರಳ.

ಇಂಥ ಅನುಕೂಲಗಳಿದ್ದರೂ ಚೆಕ್ಕುಗಳು ಅಪೇಕ್ಷಿತವಾದಷ್ಟು ಜನಪ್ರಿಯವಾಗಿಲ್ಲ. ಇದಕ್ಕೆ ಕಾರಣ ಇಲ್ಲದಿಲ್ಲ. ಒಂದು ಕಾರಣವೆಂದರೆ ಜನಸಾಮಾನ್ಯರ ತಿಳಿವಳಿಕೆಯ ಮಟ್ಟ ಕಡಿಮೆಯಿರುವುದು. ಇದಲ್ಲದೆ, ಬ್ಯಾಂಕ್ ಶಾಖೆಗಳ ಸಂಖ್ಯೆ ಸಾಕಷ್ಟು ಹೆಚ್ಚು ಇಲ್ಲದಿರುವುದು, ಸಾಮಾನ್ಯವಾಗಿ ಬ್ಯಾಂಕುಗಳಿಂದ ನೀಡಲಾಗುವ ಚೆಕ್ಕುಗಳು ಇಂಗ್ಲಿಷ್ ಭಾಷೆಯಲ್ಲಿ ಇರುವುದು, ಬ್ಯಾಂಕುಗಳಲ್ಲಿ ಖಾತೆ ಹೊಂದಿರುವವರ ಪ್ರಮಾಣ ನಿಯಮಿತವಾಗಿರುವುದು, ಶಾಖೆಗಳಲ್ಲಿ ಚೆಕ್ಕಿನ ಪಾವತಿ ಮಾಡಲು ವಿಳಂಬವಾಗುವುದು ಮುಂತಾದ ಕಾರಣಗಳನ್ನು ಉಲ್ಲೇಖಿಸಬಹುದು.

ಚೆಕ್ಕುಗಳ ಬಗ್ಗೆ ತಿಳಿವಳಿಕೆ ಹೆಚ್ಚುವಂತೆ ಪ್ರಚಾರಕಾರ್ಯ ನಡೆಯಬೇಕಾಗಿದೆ. ಮುಖ್ಯವಾಗಿ ಬ್ಯಾಂಕುಗಳು ಇಂತಹ ಕಾರ್ಯವನ್ನು ಮಾಡಬೇಕಾಗಿದೆ.

ಚೆಕ್ಕುಗಳಲ್ಲಿ ರೇಖಣ, ಹಿಂಬರಹ, ಸಾರಭೂತ ಬದಲಾವಣೆ ಇವುಗಳ ಅರ್ಥ ಅನೇಕರಿಗೆ ತಿಳಿದಂತಿಲ್ಲ. ಇದರಿಂದಾಗಿ ಅನೇಕ ಗ್ರಾಹಕರು ಚೆಕ್ಕುಗಳ ಪಾವತಿ ಪಡೆಯುವಲ್ಲಿ ವಿವಿಧ ರೀತಿಯ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಆದ್ದರಿಂದ ಅವುಗಳ ಬಗ್ಗೆ ಸ್ಪಷ್ಟ ತಿಳಿವಳಿಕೆ ಅಗತ್ಯ.

**ಚೆಕ್ಕಿನ ನಮೂನೆ:**

ಕನ್ನಡ ಬ್ಯಾಂಕ್
**ಮೈಸೂರು**

ನಂ. 123456

ತಾರೀಖು.........................

ಶ್ರೀ ರಾಜಗೋಪಾಲ್ ಅವರಿಗೆ ಅಥವಾ ವಾಹಕರಿಗೆ ಎರಡು ಸಾವಿರದ ಐದು ನೂರು ರೂಪಾಯಿಗಳನ್ನು ಪಾವತಿ ಮಾಡಿ.

**ರೂ. 2,500/-**

ಕೃಷ್ಣಮೂರ್ತಿ

**ರೇಖಣ**

ಚೆಕ್ಕಿನ ಮುಖಭಾಗದಲ್ಲಿ ಎರಡು ಸಮಾನಾಂತರ ಅಡ್ಡ ಗೆರೆಗಳನ್ನು ಎಳೆಯುವುದೇ ಚೆಕ್ಕಿನ ರೇಖಣ. ಈ ಎರಡು ಅಡ್ಡಗೆರೆಗಳ ನಡುವೆ 'ಮತ್ತು ಕಂಪನಿ' ಎಂದೋ ಅಥವಾ ಆ ಪದಗಳ ಸಂಕ್ಷಿಪ್ತ ರೂಪವನ್ನೋ, 'ಪರಕ್ರಾಮ್ಯವಲ್ಲ' 'ಪ್ರಾಪ್ತಿಕರ್ತನ ಲೆಕ್ಕಕ್ಕೆ' ಎಂದೋ ಬರೆಯಬಹುದು; ಇಲ್ಲವೇ ರೇಖೆಗಳ ನಡುವೆ ಅಥವಾ ರೇಖೆಗಳೇ ಇಲ್ಲದೆ ನಿರ್ದಿಷ್ಟ ಬ್ಯಾಂಕೊಂದರ ಹೆಸರನ್ನು ಬರೆಯಬಹುದು. ರೇಖಣಗೊಂಡ ಚೆಕ್ಕಿನ ಮೊಬಲಗನ್ನು ಒಬ್ಬ ಬ್ಯಾಂಕರ ನಿಗಲ್ಲದೆ ಬೇರೆಯವರಿಗೆ ಪಾವತಿ ಮಾಡಲು ಬರುವುದಿಲ್ಲ.

ರೇಖಣದಲ್ಲಿ 'ಸಾಮಾನ್ಯ' ಮತ್ತು 'ವಿಶೇಷ' ಎಂಬ ಎರಡು ವಿಧಗಳುಂಟು. ಅವುಗಳ ಮಾದರಿಗಳನ್ನು ಕೆಳಗೆ ಕೊಡಲಾಗಿದೆ:

**ಸಾಮಾನ್ಯ ರೇಖಣ**

(1)
(2) ಮತ್ತು ಕಂಪನಿ
(3) & ಕಂ.
(4) ಪರಕ್ರಾಮ್ಯವಲ್ಲ
(5) ಪ್ರಾಪ್ತಿಕರ್ತನ ಲೆಕ್ಕಕ್ಕೆ

ರೇಖಣಗೊಂಡ ಚೆಕ್ಕು ಒಬ್ಬ ಬ್ಯಾಂಕರನಿಗಲ್ಲದೆ ಬೇರೆಯವರಿಗೆ ಪಾವತಿಯುಕ್ತವಾಗುವುದಿಲ್ಲವಾದ್ದರಿಂದ ಪ್ರಾಪ್ತಿಕರ್ತ ತನ್ನ ಬ್ಯಾಂಕರನಿಗೆ ಚೆಕ್ಕನ್ನು ನೀಡುತ್ತಾನೆ. ಬ್ಯಾಂಕರ್ ಅದನ್ನು ತೀರುವಳಿ ಗೃಹದ ಮೂಲಕ ಹಾಜರುಪಡಿಸುತ್ತಾನೆ.

ಸಾಮಾನ್ಯ ರೇಖಣವಿದ್ದರೆ ಚೆಕ್ಕಿನ ಹಣವನ್ನು ಪಾವತಿದಾರ ಬ್ಯಾಂಕು ಒಬ್ಬ ಬ್ಯಾಂಕರನಿಗಲ್ಲದೆ ಬೇರೆ ಯಾರಿಗೂ ಕೊಡುವಂತಿಲ್ಲ. ಆದ್ದರಿಂದ ಇಂತಹ ಚೆಕ್ಕಿನ ಪ್ರಾಪ್ತಿಕರ್ತ ಚೆಕ್ಕಿನ ಮೊಬಲಗನ್ನು ಯಾವುದೇ ಬ್ಯಾಂಕ್ ಶಾಖೆಯಲ್ಲಿರುವ ತನ್ನ ಖಾತೆಗೆ ಜಮಾ ಮಾಡಿಕೊಂಡು ತನ್ಮೂಲಕ ಹಣ ಪಡೆಯಬಹುದು.

ಆದರೆ ವಿಶೇಷ ರೇಖಣವಿರುವ ಚೆಕ್ಕಿನ ಮೊಬಲಗನ್ನು ಆ ರೇಖಣದಲ್ಲಿ ಹೆಸರಿಸಲಾಗಿರುವ ಬ್ಯಾಂಕಿಗೆ ಅಥವಾ ಆ ಬ್ಯಾಂಕಿನ ಏಜೆಂಟ್ ಆಗಿ ವ್ಯವಹರಿಸುವ ಬ್ಯಾಂಕಿಗೆ ಮಾತ್ರ ಪಾವತಿ ಮಾಡಬಹುದು. ವಿಶೇಷ ರೇಖಣದಲ್ಲಿ ಅಡ್ಡಗೆರೆಗಳ ಅವಶ್ಯಕತೆಯೂ ಇರುವುದಿಲ್ಲ.

ವಾಹಕ ಚೆಕ್ಕು ರೇಖಣಗೊಂಡಾಗ ವಾಹಕನ ಬ್ಯಾಂಕು ಖಾತೆಗೆ ಜಮಾ ಮಾಡಲು ಅರ್ಹವಾಗುತ್ತದೆಯೇ ವಿನಾ ನೇರವಾಗಿ ನಗದು ಮಾಡಿಕೊಳ್ಳಲು ಬರುವುದಿಲ್ಲ. ವಾಹಕ ಚೆಕ್ಕು ಬ್ಯಾಂಕ್ ಒಂದಕ್ಕೆ ವಿಶೇಷವಾಗಿ ರೇಖಣಗೊಂಡಾಗ ವಾಹಕ ಅದನ್ನು ಅದೇ ಬ್ಯಾಂಕಿನಲ್ಲಿರುವ ತನ್ನ ಖಾತೆಗೆ ಮಾತ್ರ ಜಮಾ ಮಾಡಿಕೊಳ್ಳಬಹುದು. ಬೇರೆ ಬ್ಯಾಂಕಿನಲ್ಲಿರುವ ಖಾತೆಗೆ ಅಲ್ಲ.

ವಾಹಕ ಚೆಕ್ಕು 'ಪ್ರಾಪ್ತಿಕರ್ತನ ಲೆಕ್ಕಕ್ಕೆ ಮಾತ್ರ' ಎಂದು ರೇಖಣಗೊಂಡಾಗ ಉದ್ಭವಿಸುವ ಸ್ಥಿತಿ ವಿವಾದಾಸ್ಪದವಾದದ್ದು. ವಾಹಕ ಚೆಕ್ಕಿನ ಪ್ರಾಪ್ತಿಕರ್ತನಾರು? ವಾಹಕನೇ. ಆದ್ದರಿಂದ ಅಂತಹ ಚೆಕ್ಕಿನ ಮೊಬಲಗನ್ನು ವಾಹಕನ

**ವಿಶೇಷ ರೇಖಣ**

(1) ಸಿಂಡಿಕೇಟ್ ಬ್ಯಾಂಕ್
(2) ಭಾರತ್ ಬ್ಯಾಂಕ್
(3) ವಿಜಯಾ ಬ್ಯಾಂಕ್ ಪರಕ್ರಾಮ್ಯವಲ್ಲ
(4) ಪ್ರಾಪ್ತಿಕರ್ತನ ಲೆಕ್ಕಕ್ಕೆ ಮೈಸೂರ್ ಬ್ಯಾಂಕ್

ಖಾತೆಗೆ ಜಮಾ ಮಾಡಿದರೆ ತಪ್ಪಲ್ಲ, ಇದು ಒಂದು ವಾದ. ಇನ್ನೊಂದು ವಾದವೆಂದರೆ ಚೆಕ್ಕಿನ ರಚಕ 'ಪ್ರಾಪ್ತಿಕರ್ತನ ಲೆಕ್ಕಕ್ಕೆ ಮಾತ್ರ' ಎಂದು ಚೆಕ್ಕನ್ನು ರೇಖಣಗೊಳಿಸಿದಾಗ ಆತನ ಉದ್ದೇಶವೇನು? ಚೆಕ್ಕಿನಲ್ಲಿ ಹೆಸರಿಸಲಾದ ವ್ಯಕ್ತಿಯ ಖಾತೆಗೆ ಮಾತ್ರ ಮೊಬಲಗನ್ನು ಜಮಾ ಮಾಡಬೇಕೆಂದು. ಆದ್ದರಿಂದ ಚೆಕ್ಕಿನಲ್ಲಿ ಹೆಸರಿಸದ ಬೇರೊಬ್ಬನ ಖಾತೆಗೆ ಅದನ್ನು ಜಮಾ ಮಾಡಲಾಗುವುದಿಲ್ಲ ಎಂಬುದು ಇನ್ನೊಂದು ವಾದ. ಇವೆರಡು ವಾದಗಳನ್ನೂ ಎತ್ತಿಹಿಡಿಯುವವರಿದ್ದಾರಾದರೂ, ಮೊದಲನೆಯ ವಾದವೇ ಸಮಂಜಸವೆನಿಸುತ್ತದೆ. 'ಪ್ರಾಪ್ತಿಕರ್ತನ ಲೆಕ್ಕಕ್ಕೆ ಮಾತ್ರ' ಎಂದು ಚೆಕ್ಕನ್ನು ರೇಖಣಗೊಳಿಸುವಾಗ ರಚಕ 'ಅಥವಾ ವಾಹಕನಿಗೆ' ಮತ್ತು 'ಅಥವಾ ಆದೇಶಿತನಿಗೆ' ಎಂಬ ಪದಗಳನ್ನು ಹೊಡೆದುಹಾಕಿದರೆ ಈ ವಿವಾದಕ್ಕೆ ಎಡೆಯಿರುವುದಿಲ್ಲ. ವಿವರಣೆ ಅಗತ್ಯವಾಗುವ ಇನ್ನೊಂದು ರೀತಿಯ ರೇಖಣವೆಂದರೆ 'ಪರಕ್ರಾಮ್ಯವಲ್ಲ' ಎಂಬ ರೇಖಣ.

ಚೆಕ್ಕು ಪರಕ್ರಾಮ್ಯ ಸಂಲೇಖ. ಅದು ಪರಕ್ರಾಮ್ಯವಲ್ಲ ಎಂದರೆ ಹೇಗೆ? ಇದು ಹಲವರ ಸಂಶಯ. ಮತ್ತೆ ಹಲವರಿಗೆ ಪರಕ್ರಾಮ್ಯವಲ್ಲ ಎಂದು ರೇಖಣಗೊಳಿಸಲಾದ ಚೆಕ್ಕನ್ನು ಇತರರಿಗೆ ವರ್ಗಾಯಿಸಬಹುದೇ? ಎಂಬ ಸಂದೇಹ. 'ಪರಕ್ರಾಮ್ಯವಲ್ಲ' ರೇಖಣದ ಅರ್ಥವನ್ನು ಸರಿಯಾಗಿ ತಿಳಿದುಕೊಂಡರೆ ಈ ಸಂಶಯಗಳು ತಂತಾವೇ ನಿವಾರಣೆ ಯಾಗುತ್ತವೆ.

ಪರಕ್ರಾಮ್ಯ ಸಂಲೇಖವೊಂದು ಹಿಂಬರಹಗಳ ಮೂಲಕ ಒಬ್ಬರಿಂದ ಒಬ್ಬರಿಗೆ ವರ್ಗಾಯಿಸಲ್ಪಡುವಾಗ ವರ್ಗಾ ಯಿತನಿಗೆ ವರ್ಗಾವಣೆದಾರನಿಗಿಂತ ಉತ್ತಮ ಹಕ್ಕು ದೊರೆ ಯುವ ಸಾಧ್ಯತೆಯಿರುತ್ತದೆ. ಉದಾ: ಚೆಕ್ಕೊಂದು 'ಎ'ಇಂದ 'ಬಿ'ಗೆ, 'ಬಿ' ಇಂದ 'ಸಿ'ಗೆ, 'ಸಿ' ಇಂದ 'ಡಿ'ಗೆ ವರ್ಗಾಯಿತ ವಾದಾಗ 'ಸಿ' ಯು ಚೆಕ್ಕನ್ನು 'ಬಿ' ಇಂದ ಕದ್ದಿದ್ದನೆಂದು ಸಾಬೀತಾಯಿತೆನ್ನಿ. ಆಗ 'ಸಿ' ಚೆಕ್ಕಿನ ಪಾವತಿಗೆ ಅರ್ಹ ನಾಗುವುದಿಲ್ಲ. ಆದರೆ 'ಸಿ'ಯಿಂದ ಚೆಕ್ಕನ್ನು ಪಡೆದ 'ಡಿ' ಕ್ರಮಪ್ರಾಪ್ತಧಾರಕನಾಗಿದ್ದರೆ ಚೆಕ್ಕಿನ ಪಾವತಿಗೆ ಅವನು ಅರ್ಹನಾಗುತ್ತಾನೆ. ಇದು ಪರಕ್ರಾಮ್ಯ ಸಂಲೇಖಗಳ ಒಂದು ವಿಶಿಷ್ಟ ಲಕ್ಷಣ. 'ವರ್ಗಾಯಿತನು ವರ್ಗಾವಣೆ ದಾರನಿಗಿಂತ ಉತ್ತಮ ಹಕ್ಕು ಪಡೆಯುತ್ತಾನೆ' ಎನ್ನುವುದು ಈ ಅರ್ಥದಲ್ಲೆ. 'ಪರಕ್ರಾಮ್ಯವಲ್ಲ' ಎಂದು ಚೆಕ್ಕನ್ನು ರೇಖಣ ಗೊಳಿಸುವಾಗ ರಚಕನು ಉದ್ದೇಶಪೂರ್ವಕವಾಗಿಯೇ ಚೆಕ್ಕಿನ ಈ ವಿಶಿಷ್ಟಗುಣಕ್ಕೆ ಕತ್ತರಿ ಹಾಕುತ್ತಾನೆ. ಅಷ್ಟೇ ವಿನಾ, ಚೆಕ್ಕನ್ನು ಎಷ್ಟು ಬಾರಿಯಾದರೂ ವರ್ಗಾಯಿಸುತ್ತಿರಬಹುದು ಅಥವಾ ಹಸ್ತಾಂತರಗೊಳಿಸುತ್ತಿರಬಹುದು. ಆಗ ಮೇಲಿನ ಉದಾಹರಣೆಯಲ್ಲಿ 'ಡಿ' ಮತ್ತು ಅವನಿಂದ ಮುಂದಿನ ವರ್ಗಾಯಿತರು ಚೆಕ್ಕಿನ ಪಾವತಿಗೆ ಅನರ್ಹರಾಗುತ್ತಾರೆ, ಏಕೆಂದರೆ 'ಸಿ'ಯ ಹಕ್ಕು ದೋಷಯುಕ್ತವಾದುದರಿಂದ ಅವನ ಮೂಲಕ ಚೆಕ್ಕನ್ನು ಪಡೆದ ಮುಂದಿನವರ ಹಕ್ಕು ಅದಕ್ಕಿಂತ ಉತ್ತಮವಾಗುವುದಿಲ್ಲ.

ಕಳ್ಳ ಸಹಿಯ ಮಾತೇ ಬೇರೆ. ಆದೇಶ ಚೆಕ್ಕೊಂದು ಹಿಂಬರಹದ ಮೂಲಕ ವರ್ಗಾವಣೆಯಾಗುವಾಗ ಮಧ್ಯೆ ಒಂದು ಹಿಂಬರಹ ಕಳ್ಳಸಹಿಯಾದರೆ ಚೆಕ್ಕು ಪರಕ್ರಾಮ್ಯ ವಾದರೂ ಮುಂದಿನ ವರ್ಗಾಯಿತರಾರಿಗೂ ಪಾವತಿ ಪಡೆಯುವ ಹಕ್ಕಿಲ್ಲ. ಏಕೆಂದರೆ ಕಳ್ಳಸಹಿಯು ಯಾವುದೇ ಹಕ್ಕನ್ನು ನೀಡಲು ಅಸಮರ್ಥವಾದುದು.

### ಹಿಂಬರಹ

ಚೆಕ್ಕು ಒಂದು ಪರಕ್ರಾಮ್ಯ ಸಂಲೇಖವಷ್ಟೆ? ಆದ್ದರಿಂದ ಅದನ್ನು ಒಬ್ಬರು ಇನ್ನೊಬ್ಬರಿಗೆ ವರ್ಗಾಯಿಸಲು ಸಾಧ್ಯ ವುಂಟು. ಒಬ್ಬ ವ್ಯಕ್ತಿ ಅಥವಾ ವಾಹಕನಿಗೆ ಕೊಡ ಮಾಡಿದ ಚೆಕ್ಕನ್ನು ಅವನು ಇನ್ನೊಬ್ಬನಿಗೆ ಬದಲಾಯಿಸಿ ದರೆ ಅದು ಪರಕ್ರಾಮಣವಾದಂತೆ. ಆದರೆ ಚೆಕ್ಕು ಆದೇಶ ಚೆಕ್ಕಾಗಿದ್ದರೆ ಹಸ್ತಾಂತರದಿಂದ ಪರಕ್ರಾಮಣ ವಾದಂತೆ ಆಗುವುದಿಲ್ಲ. ಅದರ ಧಾರಕ ಆ ಚೆಕ್ಕನ್ನು ಇನ್ನೊಬ್ಬನಿಗೆ ಕೊಡುವ ಮೊದಲು ಚೆಕ್ಕಿನ ಹಿಂಬದಿಯಲ್ಲಿ ತನ್ನ ಸಹಿ ಹಾಕಬೇಕಾಗುತ್ತದೆ. ಹೀಗೆ ಚೆಕ್ಕಿನ ಹಿಂಬದಿ ಯಲ್ಲಿ ಸಹಿ ಹಾಕುವುದಕ್ಕೆ 'ಹಿಂಬರಹ' ಎಂದು ಕರೆಯು ತ್ತಾರೆ.

ಪರಕ್ರಾಮ್ಯ ಸಂಲೇಖಗಳ ಅಧಿನಿಯಮದ 15ನೆಯ ವಿಧಿಯಲ್ಲಿ ಹಿಂಬರಹವನ್ನು ಹೀಗೆ ನಿರೂಪಿಸಲಾಗಿದೆ.

'ಒಂದು ಪರಕ್ರಾಮ್ಯ ಸಂಲೇಖವನ್ನು ಬರೆದವನು ಅಥವಾ ಧಾರಕ ಅದನ್ನು ಬರೆಯುವಾಗ ಹಾಕುವ ಸಹಿ ಅಲ್ಲದೆ ಅದನ್ನು ವರ್ಗಾಯಿಸುವ ಉದ್ದೇಶದಿಂದ ಅದರ ಹಿಂಬದಿಯಲ್ಲಿ ಅಥವಾ ಅದರ ಮೇಲೆ ಅಥವಾ ಅದಕ್ಕೆ ಲಗತ್ತಿಸಿರುವ ಕಾಗದದ ಮೇಲೆ ಅಥವಾ ಅದರ ಹಕ್ಕನ್ನು ವರ್ಗಾಯಿಸುವುದಕ್ಕಾಗಿ ಉಪಯೋಗಿಸುವ ಛಾಪಾ ಕಾಗದದ ಮೇಲೆ ಸಹಿ ಹಾಕಿದರೆ, ಆಗ ಆತ ಆ ಸಂಲೇಖದ ಹಕ್ಕನ್ನು ವರ್ಗಾಯಿಸಿದಂತೆ ಪರಿಗಣಿಸಬೇಕು: ಮತ್ತು ಆತ 'ವರ್ಗಾವಣೆದಾರ' ಎನಿಸಿಕೊಳ್ಳುತ್ತಾನೆ.'

ಚೆಕ್ಕಿನ ಮುಖಭಾಗದ ಮೇಲೆ ವರ್ಗಾವಣೆದಾರ ಸಹಿ ಹಾಕಬಹುದೆಂದು ಕಾನೂನು ಹೇಳಿದರೂ ಚೆಕ್ಕಿನ ಹಿಂಬದಿ ಯಲ್ಲೇ ಸಹಿಹಾಕುವುದು ರೂಢಿ. ಹಿಂಬರಹ ಮಾಡುವವನು ವರ್ಗಾವಣೆದಾರ. ಯಾರಿಗೆ ಚೆಕ್ಕು ವರ್ಗಾವಣೆಯಾಗಿದೆಯೋ ಅವನು ವರ್ಗಾಯಿತ.

**ಹಿಂಬರಹದ ಪರಿಣಾಮ:** 1 ವರ್ಗಾವಣೆದಾರ ಚೆಕ್ಕಿನ ಮೇಲಿನ ತನ್ನ ಹಕ್ಕನ್ನು ಮತ್ತೊಬ್ಬನಿಗೆ ವರ್ಗಾಯಿಸುತ್ತಾನೆ. 2 ಚೆಕ್ಕಿನಲ್ಲಿ ತನ್ನ ಸಹಿಗೆ ಮೊದಲು ಇರುವ ಸಹಿಗಳು ನಿಜವಾದವುಗಳು ಎಂದು ವರ್ಗಾವಣೆದಾರ ಭರವಸೆ ನೀಡುತ್ತಾನೆ. 3 ಚೆಕ್ಕು ಬ್ಯಾಂಕಿನಲ್ಲಿ ಅನಾದರಣೆಯಾದರೆ ಚೆಕ್ಕಿನ ಮೊಬಲಗನ್ನು ತಾನು ಕೊಡುವೆನೆಂದು ಭರವಸೆ ನೀಡುತ್ತಾನೆ.

**ಹಿಂಬರಹದ ವಿಧಗಳು:** ಹಿಂಬರಹಗಳಲ್ಲಿ ಹಲವು ವಿಧಗಳುಂಟು:

1 ಚೆಕ್ಕಿನ ಪ್ರಾಪ್ತಿಕರ್ತ ಅಥವಾ ಹಿಂಬರಹಗಾರ ವರ್ಗಾಯಿತನ ಹೆಸರನ್ನು ಬರೆಯದೆ ತನ್ನ ಸಹಿಯನ್ನು ಮಾತ್ರ ಹಾಕಿದಾಗ ಅದು ಸಾಮಾನ್ಯ ಹಿಂಬರಹವಾಗುತ್ತದೆ.

ಉದಾ: ನಿರ್ಮಲ ಕುಮಾರ್

ಹೀಗೆ ಆದೇಶ ಚೆಕ್ಕೊಂದರ ಹಿಂದೆ ಪ್ರಾಪ್ತಿಕರ್ತ ಸಹಿ ಮಾಡಿದರೆ ಮುಂದೆ ಅದು ವಾಹಕ ಚೆಕ್ಕು ಆಗುತ್ತದೆ. ಇಂಥ ಹಿಂಬರಹವನ್ನು ಸರಳ ಅಥವಾ ಖಾಲಿ ಹಿಂಬರಹ ಎನ್ನುತ್ತಾರೆ.

2 ಹಿಂಬರಹಗಾರ ಸಹಿ ಮಾಡುವ ಮೊದಲು ವರ್ಗಾಯಿತನಿಗೆ ಅಥವಾ ಅವನ ಆದೇಶಕ್ಕೆ ಪಾವತಿ ಮಾಡಬೇಕೆಂದು ಸೂಚಿಸಿದರೆ ಅದು ವಿಶೇಷ ಅಥವಾ ಸಂಪೂರ್ಣ ಹಿಂಬರಹ ಎನಿಸುತ್ತದೆ.

ಉದಾ: ಬಿ. ಜಯರಾಂ ಅಥವಾ ಆದೇಶಕ್ಕೆ.
(ಸಹಿ) ರಾಜಣ್ಣ

ಈ ಚೆಕ್ಕನ್ನು ಮುಂದೆ ವರ್ಗಾಯಿಸಬೇಕಾದರೆ ಬಿ. ಜಯರಾಂ ಸಹಿ ಮಾಡಬೇಕು.

ಆದ್ದರಿಂದ ಚೆಕ್ಕನ್ನು ಪಡೆಯುವಾಗ ವರ್ಗಾಯಿತ ಹಿಂಬರಹಗಳನ್ನು ಗಮನಿಸಿ ಚೆಕ್ಕಿನ ಮೊತ್ತ ತನಗೆ ಪಾವತಿ ಯುಕ್ತವಾಗುವುದೋ ಇಲ್ಲವೋ ಎಂಬುದನ್ನು ಖಚಿತ ಪಡಿಸಿಕೊಳ್ಳಬೇಕು.

3 ಎಸ್. ರಾಮಣ್ಣ ಅವರಿಗೆ ಮಾತ್ರ ಪಾವತಿಮಾಡಿ
(ಸಹಿ) ಕೆ. ಭೀಮಣ್ಣ

ಎಂದು ಹಿಂಬರಹಗಾರ ವರ್ಗಾವಣೆಯನ್ನು ನಿಷೇಧಿಸಬಹುದು. ಆಗ ಚೆಕ್ಕು 'ಎಸ್. ರಾಮಣ್ಣ'ನವರಿಗೆ ಮಾತ್ರ ಪಾವತಿಯುಕ್ತವಾಗುವುದು. ಮುಂದೆ ಅದನ್ನು ಪರಕ್ರಾಮ್ಯಗೊಳಿಸಲಾಗುವುದಿಲ್ಲ. ಇಂತಹ ಹಿಂಬರಹಕ್ಕೆ ನಿರ್ಬಂಧಕ ಹಿಂಬರಹ ಎನ್ನುವರು.

**ಹಿಂಬರಹದ ಕ್ರಮಬದ್ಧತೆ:** ಬ್ಯಾಂಕರನ ಮನ್ನಣೆ ಪಡೆಯಬೇಕಾದರೆ ಹಿಂಬರಹಗಳನ್ನು ಹಲವು ನಿಯಮಗಳಿಗೆ ಅನುಸಾರವಾಗಿ ಮಾಡಬೇಕು. ಹಿಂಬರಹ ಕ್ರಮವಿಹೀನವಾಗಿದ್ದಲ್ಲಿ ಚೆಕ್ಕುಗಳ ಪಾವತಿ ಸಾಧ್ಯವಾಗದಿರಬಹುದು.

1 (ಎ) ಪ್ರಾಪ್ತಿಕರ್ತ ಚೆಕ್ಕನ್ನು ವರ್ಗಾಯಿಸುವಾಗ ಚೆಕ್ಕಿನ ಹಿಂದೆ ತನ್ನ ಸಹಿ ಹಾಕಬೇಕು. ಅವನ ಹೆಸರನ್ನು ಚೆಕ್ಕಿನಲ್ಲಿ ಬರೆಯಲಾಗಿರುವ ಕಾಗುಣಿತ ಕ್ರಮದಂತೆಯೇ ಹಿಂಬರಹ ಮಾಡಬೇಕು. ಉದಾ: ಚೆಕ್ಕು ಕೆ. ಮೂರ್ತಿ ಎಂಬವರಿಗೆ ಕೊಡಲಾಗಿದ್ದು—ಚೆಕ್ಕಿನಲ್ಲಿ 'ಶ್ರೀ ಕೆ. ಮೂರ್ರ್ತಿ ಅಥವಾ ಆದೇಶಕ್ಕೆ' ಎಂದು ಬರೆದಿದ್ದರೆ ಹಿಂಬರಹದಲ್ಲಿ 'ಕೆ. ಮೂರ್ರ್ತಿ' ಎಂದು ಸಹಿಮಾಡಿ, ಸಹಿಯ ಕೆಳಗೆ ತಮ್ಮ ಮಾಮೂಲು ರೀತಿಯಲ್ಲಿ 'ಕೆ. ಮೂರ್ತಿ' ಎಂದು ಬರೆಯಬೇಕು.

ಉದಾ: (ಸಹಿ) ಕೆ. ಮೂರ್ರ್ತಿ
ಕೆ. ಮೂರ್ತಿ

(ಬಿ) ಸಹಿಯಲ್ಲಿನ ಕಾಗುಣಿತ ಅಸ್ಪಷ್ಟವಾಗಿದ್ದು ಹೆಸರನ್ನು ಓದಲು ಸಾಧ್ಯವಾಗದಿದ್ದಾಗಲೂ ಇದೇ ಕ್ರಮ ಅನುಸರಿಸಬೇಕು.

ಉದಾ: (ಸಹಿ) (ಅಸ್ಪಷ್ಟ)
ಕೆ. ಮೂರ್ತಿ

ಇಂತಹ ಸಂದರ್ಭದಲ್ಲಿ ಸಹಿ ಕೆ. ಮೂರ್ತಿಯದೇ ಎಂದು ಬ್ಯಾಂಕರ್ ಖಚಿತಪಡಿಸಿಕೊಳ್ಳಲು ಇಚ್ಛಿಸಬಹುದು.

2 ಹಿಂಬರಹದ ಸಹಿಯಲ್ಲಿ ಮರ್ಯಾದಾರ್ಥವಾಗಿ ಶ್ರೀ, ಶ್ರೀಮತಿ, ಕುಮಾರಿ ಎಂದು ಅಥವಾ ಯಾವುದೇ ಬಿರುದು ಪದವಿ ಪ್ರಶಸ್ತಿಗಳನ್ನು ಬರೆಯುವಂತಿಲ್ಲ.

| ಚೆಕ್ಕಿನಲ್ಲಿ ಹೀಗಿದ್ದರೆ | ಹಿಂಬರಹ ಮಾಡಬೇಕಾದ ಕ್ರಮವು |
|---|---|
| ಶ್ರೀಮತಿ ಮಾಹೇಶ್ವರಿ ಅಥವಾ ಆದೇಶಕ್ಕೆ | ಮಾಹೇಶ್ವರಿ |
| ಡಾ॥ ಕೆ. ಕಿರಣ್ ಅಥವಾ ಆದೇಶಕ್ಕೆ | ಕೆ. ಕಿರಣ್ |
| ಪದ್ಮಶ್ರೀ ಸರೋಜಿನಿ ಅಥವಾ ಆದೇಶಕ್ಕೆ | ಸರೋಜಿನಿ |
| ದೇವಕಾರ್ಯಪ್ರವೀಣ ಭಕ್ತಾರಾಂ ಅಥವಾ ಆದೇಶಕ್ಕೆ | ಭಕ್ತಾರಾಂ |

3 (ಎ) ವಿವಾಹಿತ ಮಹಿಳೆಗೆ ಚೆಕ್ಕನ್ನು ಕೊಟ್ಟು ಚೆಕ್ಕಿನಲ್ಲಿ 'ಶ್ರೀಮತಿ ರಾಂ' ಅಥವಾ ಆದೇಶಕ್ಕೆ ಎಂದು ಪತಿಯ ಹೆಸರು ಬರೆದಿದ್ದರೆ—ಹಿಂಬರಹ ಹೀಗಿರಬೇಕು:

(ಸಹಿ) ಕಮಲಾ ರಾಂ
(ರಾಂ ಅವರ ಪತ್ನಿ)

(ಬಿ) ಅವಿವಾಹಿತ ಮಹಿಳೆಗೆ ಕೊಟ್ಟ ಚೆಕ್ಕಿನಲ್ಲಿ ಕುಮಾರಿ ಸೇನ್ ಗುಪ್ತ ಎಂದು ತಂದೆಯ ಹೆಸರನ್ನು ಬರೆದಿದ್ದರೆ:

(ಸಹಿ) ಮಾಲಾ ಸೇನ್ ಗುಪ್ತ
(ಸೇನ್ ಗುಪ್ತರ ಮಗಳು)

ಎಂದು ಹಿಂಬರಹ ಇರಬೇಕು.

ಆದರೆ ಚೆಕ್ಕಿನಲ್ಲಿ ಕುಮಾರಿ ಮಾಲಾ ಎಂದಿದ್ದರೆ 'ಮಾಲಾ' ಎಂಬ ಹಿಂಬರಹ ಸಾಕು.

4 ಹಿಂಬರಹ ಕಂಪನಿ ಮುಂತಾದ ಸಂಸ್ಥೆಗಳ ಪರವಾಗಿ ಮಾಡಿದುದಾದರೆ ನಿರ್ದಿಷ್ಟ ಅಧಿಕಾರಿಯೊಬ್ಬನ ಸಹಿಯನ್ನೊಳಗೊಂಡು ಅವನ ಹುದ್ದೆ ಅಥವಾ ಅಧಿಕಾರವನ್ನು ಸೂಚಿಸಬೇಕು.

ಉದಾ: (1) ಕೌಮುದಿ ಸಾರಸ್ವತ ಸಂಘದ ಪರವಾಗಿ
(ಸಹಿ) ಭಾಸ್ಕರ ಶರ್ಮ
ಕಾರ್ಯದರ್ಶಿ

(2) ಎ.ಬಿ.ಸಿ. ಕಂಪನಿ ಲಿಮಿಟೆಡ್ ಪರವಾಗಿ
(ಸಹಿ) ಬಲರಾಂ
ಮ್ಯಾನೇಜಿಂಗ್ ಡೈರೆಕ್ಟರ್

5 ಅನಕ್ಷರಸ್ಥನೊಬ್ಬನಿಗೆ ನೀಡಲಾದ ಚೆಕ್ಕನ್ನು ಆತ ತನ್ನ ಎಡಗೈ ಹೆಬ್ಬೆಟ್ಟಿನ ಗುರುತು ಹಾಕಿ ಹಿಂಬರಹ ಮಾಡಬಹುದು. ಈ ಗುರುತಿಗೆ ಬ್ಯಾಂಕಿಗೆ ಪರಿಚಯವಿರುವ ಇನ್ನೊಬ್ಬ ವ್ಯಕ್ತಿಯ ಸಾಕ್ಷ್ಯ ಇರಬೇಕು.

ಉದಾ: (ಎಡಗೈ ಹೆಬ್ಬೆಟ್ಟಿನ ಗುರುತು)
ಸಿದ್ದಪ್ಪನವರ ಎಡಗೈ ಹೆಬ್ಬೆಟ್ಟಿನ ಗುರುತು
ಕುಮಾರಪ್ಪ (ಸಹಿ)

**ಸಾರಭೂತ ಬದಲಾವಣೆ**

ಚೆಕ್ಕಿನಲ್ಲಿ ರಚಕ ಅಥವಾ ಹಿಂಬರಹಗಾರ ಕೆಲವು ಬದಲಾವಣೆಗಳನ್ನು ಮಾಡಲು ಅವಕಾಶವುಂಟು.

ಯಾವ ಬದಲಾವಣೆಯಿಂದ ಚೆಕ್ಕಿನ ಕಕ್ಷಿಗಳ ಹಕ್ಕಿನ ಸ್ವರೂಪ ಬದಲಾಗುವುದೋ ಅಂಥ ಬದಲಾವಣೆಯನ್ನು ಸಾರಭೂತ ಬದಲಾವಣೆ ಎನ್ನಲಾಗುವುದು. ಚೆಕ್ಕಿನಲ್ಲಿ ಸಾರಭೂತ ಬದಲಾವಣೆಗಳನ್ನು ಚೆಕ್ಕಿನ ರಚಕ ಮಾತ್ರ ಮಾಡಬಹುದು.

ಚೆಕ್ಕಿನ ದಿನಾಂಕ, ಪಾವತಿಯ ಸ್ಥಳ, ಪ್ರಾಪ್ತಿಕರ್ತನ ಹೆಸರು, ಮೊಬಲಗು (ಅಕ್ಷರಗಳಲ್ಲಿ ಅಥವಾ ಅಂಕಿಗಳಲ್ಲಿ) ಇವುಗಳಲ್ಲಿ ಬದಲಾವಣೆ; ಅಥವಾ ರೇಖಣಗೊಂಡ ಚೆಕ್ಕಿನಲ್ಲಿ ರೇಖಣದ ರದ್ದು, ಬ್ಯಾಂಕೊಂದಕ್ಕೆ ವಿಶೇಷವಾಗಿ ರೇಖಣಗೊಂಡ ಚೆಕ್ಕನ್ನು ಸಾಮಾನ್ಯ ರೇಖಣವಾಗಿ ಪರಿವರ್ತಿಸುವುದು, ಅಥವಾ ಬೇರೆ ಬ್ಯಾಂಕಿಗೆ ವಿಶೇಷ ರೇಖಣಗೊಳಿಸುವುದು ಇವು ಸಾರಭೂತ ಬದಲಾವಣೆಗಳಾದುದರಿಂದ ಇಂಥ ಬದಲಾವಣೆಗಳಾದ ಎಡೆಗಳಲ್ಲಿ ರಚಕನ ಸಹಿ ಅಗತ್ಯವಾಗುತ್ತದೆ. ಆದ್ದರಿಂದ ಚೆಕ್ಕನ್ನು ಬರೆಯುವಾಗ ತಪ್ಪಾಗಿ, ಅದನ್ನು ತಿದ್ದಿದಾಗ ಅಂಥ ಕಡೆ ರಚಕ ಪೂರ್ಣವಾಗಿ ಸಹಿ ಮಾಡಬೇಕಾಗುತ್ತದೆ. ಆದ್ಯಕ್ಷರ ಹಾಕಿದರೆ ಸಾಲದು. ರಚಕ (ಅಥವಾ ರಚಕನಿಂದ ಅಥವಾ ಹಿಂಬರಹಗಾರನೊಬ್ಬನಿಂದ) ಚೆಕ್ಕನ್ನು ಪಡೆದ ಧಾರಕನೊಬ್ಬ ಚೆಕ್ಕಿನಲ್ಲಿ ಕೆಲವು ರೀತಿಯ ಬದಲಾವಣೆಗಳನ್ನು ಮಾಡಲು ಅವಕಾಶವುಂಟು. ಈ ಕೆಳಗಿನ ಬದಲಾವಣೆಗಳನ್ನು ಸಾರಭೂತ ಬದಲಾವಣೆಗಳೆಂದು ಪರಿಗಣಿಸಲಾಗುವುದಿಲ್ಲ; ಅದಕ್ಕೆ ರಚಕನ/ಧಾರಕನ ಸಹಿ ಬೇಕಿಲ್ಲ:

1 ವಾಹಕ ಚೆಕ್ಕನ್ನು ಆದೇಶ ಚೆಕ್ಕನ್ನಾಗಿ ಚೆಕ್ಕಿನ ಧಾರಕ ಪರಿವರ್ತಿಸಬಹುದು. ಚೆಕ್ಕಿನಲ್ಲಿ 'ವಾಹಕನಿಗೆ' ಎಂಬ ಪದವನ್ನು ಹೊಡೆದುಹಾಕಿ 'ಆದೇಶಕ್ಕೆ' ಎಂದು ಬರೆಯುವುದರ ಮೂಲಕ ಈ ಪರಿವರ್ತನೆ ಸಾಧ್ಯ. ಆದರೆ ಆದೇಶ ಚೆಕ್ಕನ್ನು ವಾಹಕ ಚೆಕ್ಕನ್ನಾಗಿ ಪರಿವರ್ತಿಸಲು ರಚಕನ ಸಹಿ ಅಗತ್ಯ. ಏಕೆಂದರೆ ಅದು ಸಾರಭೂತ ಬದಲಾವಣೆ.

2 (ಎ) ರೇಖಣಗೊಳ್ಳದ ಚೆಕ್ಕನ್ನು ರೇಖಣಗೊಳಿಸಬಹುದು.

(ಬಿ) ಸಾಮಾನ್ಯ ರೇಖಣವಿರುವ ಚೆಕ್ಕನ್ನು ಬ್ಯಾಂಕೊಂದಕ್ಕೆ ವಿಶೇಷವಾಗಿ ರೇಖಣಗೊಳಿಸಬಹುದು.

3 ರಚಕ ಖಾಲಿ ಅಥವಾ ಅಪೂರ್ಣ ಚೆಕ್ಕಿಗೆ ಸಹಿ ಹಾಕಿ ಕೊಟ್ಟಾಗ ತಾರೀಖು, ಮೊಬಲಗು, ಮುಂತಾದ ವಿವರಗಳನ್ನು ತುಂಬಬಹುದು. ಆದರೆ ರಚಕ ಸೂಚಿಸಿದ ಮೊತ್ತಕ್ಕಿಂತ ಅಧಿಕ ಮೊತ್ತವನ್ನು ಚೆಕ್ಕಿನಲ್ಲಿ ಬರೆಯುವಂತಿಲ್ಲ.

**ಚೆಕ್ಕಿನ ಅನಾದರಣೆ**

ಚೆಕ್ಕಿನ ಪಾವತಿ ನಿರಾಕರಿಸುವುದನ್ನು 'ಚೆಕ್ಕಿನ ಅನಾದರಣೆ' ಎನ್ನುವರು. ಹಲವು ಸಂದರ್ಭಗಳಲ್ಲಿ ಬ್ಯಾಂಕರ್ ಚೆಕ್ಕನ್ನು ಅನಾದರಿಸುತ್ತಾನೆ. ಚೆಕ್ಕಿನ ಅನಾದರಣೆಯ ಹಲವು ಕಾರಣಗಳನ್ನು ತಿಳಿದಿರುವುದು ಉತ್ತಮ:

1 (ಎ) ಚೆಕ್ಕಿನ ಮೇಲೆ ರಚಕನ ಸಹಿ ಇಲ್ಲದಿದ್ದರೆ ಅಥವಾ ಚೆಕ್ಕಿನ ಮೇಲಿರುವ ರಚಕನ ಸಹಿ ಬ್ಯಾಂಕಿನ ದಾಖಲೆಯಲ್ಲಿರುವ ಆತನ ಸಹಿಯಿಂದ ಭಿನ್ನವಾಗಿದ್ದರೆ:

'ರಚಕನ ಸಹಿ ಇಲ್ಲ' ಅಥವಾ 'ರಚಕನ ಸಹಿ ಸರಿಯಾಗಿಲ್ಲ' ಎಂಬ ಕಾರಣದಿಂದ ಚೆಕ್ಕು ಅನಾದರಣೆ ಹೊಂದುತ್ತದೆ.

(ಬಿ) ಚೆಕ್ಕಿನಲ್ಲಿ ಹೊಡೆದು ಹಾಕಿರುವಲ್ಲಿ ಅಥವಾ ತಿದ್ದಿ ಬದಲಾವಣೆ ಮಾಡಿರುವಲ್ಲಿ ರಚಕನ ಪೂರ್ಣ ಸಹಿ ಇಲ್ಲದಿದ್ದರೆ 'ಬದಲಾವಣೆಗೆ/ಗಳಿಗೆ ರಚಕನ ಸಹಿಗಳು ಬೇಕು' ಎಂಬ ಕಾರಣದಿಂದ ಹಿಂದಿರುಗಿಸಲಾಗುತ್ತದೆ.

2 (ಎ) ರೇಖಣಗೊಂಡ ಚೆಕ್ಕನ್ನು ಬ್ಯಾಂಕರನಲ್ಲದವ ಹಾಜರುಪಡಿಸಿದಾಗ 'ರೇಖಿತ ಚೆಕ್ಕು; ಬ್ಯಾಂಕಿನ ಮೂಲಕ ಹಾಜರುಪಡಿಸಬೇಕು' ಎಂಬ ಕಾರಣ ನೀಡಿ ಅನಾದರಿಸಲಾಗುತ್ತದೆ.

(ಬಿ) ವಿಶೇಷ ರೇಖಣವುಳ್ಳ ಚೆಕ್ಕನ್ನು ರೇಖಣದಲ್ಲಿ ಹೆಸರಿಸಲಾದ ಬ್ಯಾಂಕಿನ ಮೂಲಕವೇ ಹಾಜರುಪಡಿಸಬೇಕು. ಬೇರೆ ಬ್ಯಾಂಕಿನ ಮೂಲಕ ಬಂದಾಗ 'ಚೆಕ್ಕು ವಿಶೇಷ ರೇಖಿತ; ಭಾರತ್ ಬ್ಯಾಂಕಿನ ಮೂಲಕ ಹಾಜರುಪಡಿಸಬೇಕು' ಎಂಬ ಕಾರಣದೊಂದಿಗೆ ಚೆಕ್ಕು ಹಿಂದಿರುಗಿಸಲ್ಪಡುತ್ತದೆ.

ಆದರೆ ಒಂದು ಬ್ಯಾಂಕು ಚೆಕ್ಕಿನ ವಸೂಲಿಗಾಗಿ ತನ್ನ 'ಏಜೆಂಟ್' ಬ್ಯಾಂಕಿನ ಮೂಲಕ ಚೆಕ್ಕನ್ನು ಹಾಜರುಪಡಿಸಿದಾಗ ಅನಾದರಿಸುವಂತಿಲ್ಲ.

3 ರಚಕನ ಖಾತೆಯಲ್ಲಿ ಹಣವಿರದಿದ್ದರೆ ಚೆಕ್ಕಿನ ಪಾವತಿ ಸಾಧ್ಯವಿಲ್ಲ. ರಚಕನಿಗೆ 'ಮಿಾರೆಳೆತ' ಸೌಲಭ್ಯವಿದ್ದರೆ ಮಿಾರೆಳೆತದ (ಓವರ್‌ಡ್ರಾಫ್ಟ್) ಮಿತಿಗೆ ಒಳಪಟ್ಟು ಚೆಕ್ಕಿನ ಪಾವತಿ ಸಾಧ್ಯವಾಗದಿದ್ದರೆ ಬ್ಯಾಂಕರ್ ಚೆಕ್ಕನ್ನು ಅನಾದರಿಸಬಹುದು. ಹಲವೊಮ್ಮೆ ಖಾತೆಗೆ ಯಾವುದೋ ಹಣ ಜಮಾ ಆಗುವುದೆಂದು ರಚಕ ನಿರೀಕ್ಷಿಸಿದ್ದು ಹಾಗಾಗದೆ ಇರುವುದುಂಟು.

ಇಂತಹ ಸಂದರ್ಭಗಳಲ್ಲಿ ಬ್ಯಾಂಕು:

'ಖಾತೆಯಲ್ಲಿ ಸಾಕಷ್ಟು ಹಣವಿಲ್ಲ'*

'ವ್ಯವಸ್ಥೆಯನ್ನು ಮಿಾರಿದೆ.'

'ಹಣ ವಸೂಲಿ ಆಗಿಲ್ಲ'

ಎಂದು ಕಾರಣ ಬರೆದು ಚೆಕ್ಕನ್ನು ಅನಾದರಿಸುತ್ತಾನೆ.

4 ಚೆಕ್ಕಿಗೆ ಸೂಕ್ತವಾದ ಹಿಂಬರಹ ಇಲ್ಲದಿದ್ದರೆ 'ಹಿಂಬರಹ ಕ್ರಮಬದ್ಧವಲ್ಲ' ಎಂದು ಚೆಕ್ಕು ಅನಾದರಣೆ ಹೊಂದುತ್ತದೆ.

5 (ಎ) ಅನಾಗತ ದಿನಾಂಕದ ಚೆಕ್ಕಿನ ಪಾವತಿ ಸಾಧ್ಯವಿಲ್ಲ. 'ಡಿಸೆಂಬರ್ 6, 1982' ಎಂದು ದಿನಾಂಕವಿರುವ ಚೆಕ್ಕನ್ನು 'ಡಿಸೆಂಬರ್ 5, 1982'ರಂದು ಹಾಜರುಪಡಿಸಿದರೆ—'ಚೆಕ್ಕು ಅನಾಗತ ದಿನಾಂಕದ್ದು' ಎಂದು ಹಿಂದಕ್ಕೆ ಬರುತ್ತದೆ.

(ಬಿ) ಹಾಜರುಪಡಿಸಿದ ದಿನಾಂಕಕ್ಕಿಂತ 6 ತಿಂಗಳಿಗಿಂತ ಹಿಂದಿನ ಒಂದು ತಾರೀಖಿದ್ದರೂ ಸಹ ಚೆಕ್ಕು ಪಾವತಿಗೆ ಅನರ್ಹವಾಗುತ್ತದೆ. ಉದಾ: '9–1–82' ಎಂಬ ದಿನಾಂಕವಿರುವ ಚೆಕ್ಕನ್ನು 10–7–82ರಂದು ಪಾವತಿಗೆ ಹಾಜರುಪಡಿಸಿದರೆ 'ಕಾಲಾತೀತ ಚೆಕ್ಕು' ಎಂಬ ಕಾರಣದಿಂದ ಅದನ್ನು ಅನಾದರಿಸಲಾಗುತ್ತದೆ.

6 ಚೆಕ್ಕು ಅತಿಯಾಗಿ ಮಲಿನಗೊಂಡಾಗ ಅಥವಾ ಹರಿದಾಗ ಚೆಕ್ಕಿನ ಮೇಲಿರುವ ಹಲವು ನಮೂದನೆಗಳು ಸಂಶಯಾಸ್ಪದವಾಗುವ, ಅಸ್ಪಷ್ಟವಾಗುವ ಅಥವಾ ನಷ್ಟವಾಗುವ ಸಂಭವವಿರುವುದು. ಅಂತಹ ಸಂದರ್ಭದಲ್ಲಿ 'ಚೆಕ್ಕು ಮಲಿನಗೊಂಡಿದೆ/ಹರಿದಿದೆ' ಎಂದು ತಿಳಿಸಿ ಚೆಕ್ಕನ್ನು ವಾಪಸು ಮಾಡಲಾಗುವುದು.

7 ಚೆಕ್ಕಿನ ಮೊಬಲಗನ್ನು ಅಕ್ಷರ ಮತ್ತು ಅಂಕಿಗಳಲ್ಲಿ ಬೇರೆಬೇರೆಯಾಗಿ ನಮೂದಿಸಿದ್ದಾಗ ಅಕ್ಷರಗಳಲ್ಲಿ ಬರೆದ ಮೊಬಲಗನ್ನೇ ಚೆಕ್ಕಿನ ಮೊಬಲಗೆಂದು ತಿಳಿಯತಕ್ಕದ್ದು ಎಂದು ಪರಕ್ರಾಮ್ಯ ಸಂಲೇಖಗಳ ಅಧಿನಿಯಮದ 18ನೆಯ ಪ್ರಕರಣ ತಿಳಿಸುತ್ತದೆ. ಆದರೂ ಅಂತಹ ಚೆಕ್ಕುಗಳನ್ನು 'ಚೆಕ್ಕಿನ ಮೊಬಲಗು ಅಕ್ಷರ ಮತ್ತು ಅಂಕಿಗಳಲ್ಲಿ ಬೇರೆಯಾಗಿದೆ' ಎಂಬ ಕಾರಣ ನೀಡಿ ಅನಾದರಿಸುವುದು ಬ್ಯಾಂಕುಗಳ ರೂಢಿಯಾಗಿತ್ತು. ಅಂತಹ ಸಂದರ್ಭದಲ್ಲಿ ಅಕ್ಷರಗಳಲ್ಲಿ ನಮೂದಿಸಲಾಗಿರುವ ಮೊಬಲಗನ್ನು ಪಾವತಿಮಾಡಬೇಕೆಂದು ಇತ್ತೀಚೆಗೆ ಭಾರತೀಯ ಬ್ಯಾಂಕರುಗಳ ಸಂಘ ಬ್ಯಾಂಕುಗಳಿಗೆ ಆದೇಶ ನೀಡಿದೆ. ಇಷ್ಟೆಲ್ಲಾ ಇದ್ದರೂ, ಈ ಎರಡು ಮೊಬಲಗುಗಳ ಅಂತರ ಒಂದು ದೊಡ್ಡ ಮೊಬಲಗಾಗಿದ್ದರೆ ರಚಕನ ಹಿತದೃಷ್ಟಿಯನ್ನು ಗಮನದಲ್ಲಿರಿಸಿ ಬ್ಯಾಂಕು ಚೆಕ್ಕನ್ನು ಅನಾದರಿಸುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಆದ್ದರಿಂದ ಅಕ್ಷರ ಮತ್ತು ಅಂಕಿಗಳಲ್ಲಿ ನಮೂದಿಸಲಾಗಿರುವ ಮೊಬಲಗು ಒಂದೇ ಎಂದು ರಚಕ ಖಚಿತಪಡಿಸಿಕೊಳ್ಳುವುದು ಉತ್ತಮ.

8 (ಎ) ಆದೇಶ ಚೆಕ್ಕು ತೀರುವೆ ಮನೆಯ ಮೂಲಕ ಹಾಜರಾದಾಗ ವಸೂಲಿ ಬ್ಯಾಂಕರ್ ಚೆಕ್ಕಿನ ಹಿಂಬದಿಯಲ್ಲಿ 'ಪ್ರಾಪ್ತಿಕರ್ತನ ಖಾತೆಗೆ ಜಮಾ ಮಾಡಲಾಗಿದೆ/ಮಾಡಲಾಗುವುದು' ಎಂದು ತಿಳಿಸುವ ಮುದ್ರೆಯನ್ನೊತ್ತಬೇಕು. ಇಲ್ಲದಿದ್ದಲ್ಲಿ:

ಬ್ಯಾಂಕರನ ಪ್ರಮಾಣಪತ್ರ ಬೇಕು ಎಂಬ ಕಾರಣದಿಂದ ಚೆಕ್ಕು ಹಿಂದಿರುಗುತ್ತದೆ.

(ಬಿ) ಆದೇಶ ಚೆಕ್ಕೊಂದಕ್ಕೆ ಎರಡು ಹಿಂಬರಹಗಳಿದ್ದರೆ ಬ್ಯಾಂಕರನ ಜವಾಬ್ದಾರಿ ಇನ್ನೂ ಹೆಚ್ಚು. ಆಗ ಬ್ಯಾಂಕರ್ 'ಮೊದಲನೆ ಪ್ರಾಪ್ತಿಕರ್ತನ ಹಿಂಬರಹವನ್ನು ಖಚಿತಪಡಿಸಲಾಗಿದೆ, ಎರಡನೆ ಪ್ರಾಪ್ತಿಕರ್ತನ ಖಾತೆಗೆ ಜಮಾ ಮಾಡಲಾಗುವುದು / ಮಾಡಲಾಗಿದೆ ಎಂದು ಪ್ರಮಾಣಿಸಬೇಕು.

ಎರಡಕ್ಕಿಂತ ಹೆಚ್ಚು ಹಿಂಬರಹಗಳಿದ್ದರೆ:

'ಮೊದಲನೆ ಪ್ರಾಪ್ತಿಕರ್ತನ ಹಿಂಬರಹಗಳನ್ನು ಖಚಿತಪಡಿಸಲಾಗಿದೆ. ಕೊನೆಯ ಪ್ರಾಪ್ತಿಕರ್ತನ ಖಾತೆಗೆ ಜಮಾ ಮಾಡಲಾಗುವುದು/ಮಾಡಲಾಗಿದೆ ಎಂದು ಪ್ರಮಾಣಿಸಬೇಕು.

ಇಲ್ಲದಿದ್ದಲ್ಲಿ: 'ಬ್ಯಾಂಕರನ ಪ್ರಮಾಣಪತ್ರ ಸರಿಯಾಗಿಲ್ಲ' ಎಂಬ ಕಾರಣದಿಂದ ಚೆಕ್ಕು ವಾಪಸಾಗುತ್ತದೆ.

(ಸಿ) ಆದೇಶ ಚೆಕ್ಕೊಂದು 'ಪ್ರಾಪ್ತಿಕರ್ತನ ಲೆಕ್ಕಕ್ಕೆ ಮಾತ್ರ' ಎಂಬ ರೇಖಣ ಹೊಂದಿದ್ದಾಗ ಉದ್ಭವಿಸುವ

---

* ಈ ಕಾರಣಕ್ಕೆ ಬದಲು 'ರಚಕನನ್ನು ವಿಚಾರಿಸಿ' ಎಂದು ಬರೆಯುವುದುಂಟು. ನೇರವಾಗಿ 'ಹಣವಿಲ್ಲ ಎಂದು ಹೇಳುವುದರಿಂದ ಗ್ರಾಹಕನ ಖಾತೆಯ ಸ್ಥಿತಿಯ ರಹಸ್ಯವನ್ನು ಬಯಲು ಮಾಡಿದ ದೋಷಕ್ಕೆ ಒಳಗಾದಂತಾಗಬಹುದೆಂಬುದು ಇದಕ್ಕೆ ಕಾರಣ.

ಸ್ಥಿತಿ ಹೆಚ್ಚು ತೊಡಕಿನದು. ಇಂತಹ ಚೆಕ್ಕನ್ನು ಚೆಕ್ಕಿನ ಮುಖಭಾಗದಲ್ಲಿ ರಚಕನಿಂದ ಹೆಸರಿಸಲ್ಪಟ್ಟ ವ್ಯಕ್ತಿಗೆ ಮಾತ್ರ ಪಾವತಿ ಮಾಡಲಾಗುತ್ತದೆ. ಅಂತಹ ಸಂದರ್ಭದಲ್ಲಿ ಚೆಕ್ಕಿನ ಹಿಂದೆ ಬೇರೆ ಯಾವುದೇ ಹಿಂಬರಹವಿದ್ದರೂ ಆ ಹಿಂಬರಹ ಮಾಡಿದವರಿಂದಲೇ ಅದನ್ನು ರದ್ದುಪಡಿಸುವ ವ್ಯವಸ್ಥೆ ಮಾಡಿ, ವಸೂಲಿ ಬ್ಯಾಂಕರ್ ತನ್ನ ಪ್ರಮಾಣ ಪತ್ರದೊಡನೆ ಚೆಕ್ಕನ್ನು ಪಾವತಿಗೆ ಹಾಜರುಪಡಿಸಬೇಕು. ಇಲ್ಲವಾದರೆ, ಪಾವತಿ ಬ್ಯಾಂಕರ್ ಅದನ್ನು 'ಅನಗತ್ಯ ಹಿಂಬರಹವನ್ನು/ಗಳನ್ನು ಮಾಡಿದವರು ಅದನ್ನು ರದ್ದು ಪಡಿಸಬೇಕು' ಎಂದು ಹಿಂದಿರುಗಿಸುತ್ತಾನೆ.

ಹೀಗೆ ವಸೂಲಿದಾರ ಬ್ಯಾಂಕರನ ಅಲಕ್ಷ್ಯ ಅಥವಾ ಲೋಪದಿಂದ ಗ್ರಾಹಕನಿಗೆ ಪಾವತಿ ತಡವಾಗುವ ಸಂಭವ ಗಳೂ ಉಂಟು.

9 ಚೆಕ್ಕು ಬೇರೆ ಬ್ಯಾಂಕಿನಲ್ಲಿ ಅಥವಾ ಸರಿಯಾದ ಬ್ಯಾಂಕಿನ ಬೇರೆ ಶಾಖೆಯಲ್ಲಿ ಪಾವತಿಗೆ ಹಾಜರಾದಾಗ 'ನಮ್ಮ ಮೇಲೆ ರಚಿಸಲ್ಪಟ್ಟುದಲ್ಲ' ಎಂದು ಅನಾದರಣೆ ಹೊಂದುತ್ತದೆ, ಅದೇ ರೀತಿ, ಬ್ಯಾಂಕು ನಿಗದಿಪಡಿಸಿದ ಚೆಕ್ ಹಾಳೆಯಲ್ಲಲ್ಲದೆ ಬೇರೆ ಕಾಗದದಲ್ಲಿ ಸಂಲೇಖವನ್ನು ಬರೆದಿದ್ದಾಗ, ಪೆನ್ಸಿಲ್ಲಿನಿಂದ ಚೆಕ್ಕನ್ನು ಬರೆದಿದ್ದಾಗ, ಚೆಕ್ಕನ್ನು ಅಪೂರ್ಣವಾಗಿ ಬರೆದಿದ್ದಾಗ ಅಥವಾ ಬ್ಯಾಂಕಿನ ಕೆಲಸದ ವೇಳೆಯನ್ನು ಮೀರಿ ಚೆಕ್ಕನ್ನು ಪಾವತಿಗೆ ಹಾಜರುಪಡಿಸಿ ದಾಗ ಬ್ಯಾಂಕರ್ ಆಯಾ ಕಾರಣ ನೀಡಿ ಚೆಕ್ಕನ್ನು ಹಿಂದಿರು ಗಿಸುತ್ತಾನೆ.

10 ಚೆಕ್ಕಿನ ರಚಕ ಬ್ಯಾಂಕರನಿಗೆ 'ಪಾವತಿ ತಡೆ' ಸೂಚನೆಯನ್ನಿತ್ತಾಗ 'ಪಾವತಿ ತಡೆಯಲ್ಪಟ್ಟಿದೆ' ಎಂಬ ಕಾರಣ ಕೊಟ್ಟು ಚೆಕ್ಕನ್ನು ಅನಾದರಿಸಲಾಗುವುದು.

11 ಖಾತೆಯಿಂದ ಹಣ ಕೊಡಬಾರದೆಂದು ಕೋರ್ಟಿ ನಿಂದ ಬಂದ ಆಜ್ಞೆ, ರಚಕನ ಸಾವು/ಮನೋವೈಕಲ್ಯ, ಜಂಟಿ ಖಾತೆದಾರರಲ್ಲಿ ವ್ಯವಹಾರದ ಬಗ್ಗೆ ಮನಸ್ತಾಪ, ರಚಕನ ದಿವಾಳಿತನ ಮುಂತಾದ ಅನೇಕ ಕಾರಣಗಳಿಂದ ಚೆಕ್ಕು ಅನಾದರಣೆ ಹೊಂದುತ್ತದೆ,

12 ಸಂಘ ಸಂಸ್ಥೆಗಳು, ಕಂಪನಿಗಳು ಮುಂತಾದು ವುಗಳ ಪರವಾಗಿ ಚೆಕ್ಕನ್ನು ರಚಿಸುವಾಗ ಅಧಿಕಾರಿಯ ಜತೆ 'ಸಂಸ್ಥೆಯ ಪರವಾಗಿ' ಎಂಬ ಮುದ್ರೆಯಿದ್ದು, ಸಹಿ ಮಾಡುವವನ ಹುದ್ದೆಯನ್ನು ತಿಳಿಸಬೇಕು. ಇಲ್ಲದಿದ್ದರೆ 'ಅಸ್ತಿಯನ್ನು ಗುರುತಿಸಲಾಗಿಲ್ಲ' ಎಂಬ ಕಾರಣದಿಂದ ಚೆಕ್ಕು ಅನಾದರಣೆ ಹೊಂದುವುದು.

**ಚೆಕ್ಕಿನ ಕಕ್ಷಿಗಾರರು**

ಚೆಕ್ಕನ್ನು ರಚಿಸುವವನು (ಎಂದರೆ ಚೆಕ್‌ನಲ್ಲಿರುವ ಆದೇಶ ವನ್ನು ನೀಡುವವನು) 'ರಚಕ' ಎಂದು, ಮತ್ತು ಹಣ ನೀಡ ಬೇಕೆಂಬ ಆದೇಶವನ್ನು ಪಡೆದವನು 'ರಚಯಿತ' ಎಂದು ಕರೆಯಲ್ಪಡುತ್ತಾರೆ.

ಯಾರಿಗೆ ಅಥವಾ ಯಾರ ಆದೇಶಕ್ಕೆ ಚೆಕ್ಕಿನ ಮೊಬಲ ಗನ್ನು ಪಾವತಿ ಮಾಡಬೇಕೆಂದು ಸಂಲೇಖದಲ್ಲಿ ಹೆಸರಿಸಿ ನಿರ್ದೇಶಿಸಲಾಗಿದೆಯೋ ಆ ವ್ಯಕ್ತಿ 'ಪ್ರಾಪ್ತಿಕರ್ತ' ಎಂದು ಕರೆಯಲ್ಪಡುತ್ತಾನೆ. 'ರಚಕ', 'ರಚಯಿತ' ಮತ್ತು 'ಪ್ರಾಪ್ತಿಕರ್ತ' ಇವರು ಚೆಕ್ಕಿನ ಮೂರು ಕಕ್ಷಿಗಾರರು. ಈ ಮೂರು ಕಕ್ಷಿಗಾರರೂ ಬೇರೆಬೇರೆಯೇ ಆಗ ಬೇಕೆಂದೇನಿಲ್ಲ. ಚೆಕ್ಕಿನ ರಚಕನೊಬ್ಬ ತನಗೇ ಹಣ ನೀಡಲು ಆದೇಶ ನೀಡಬಹುದು. ಆಗ ರಚಕ ಮತ್ತು ಪ್ರಾಪ್ತಿಕರ್ತ ಒಬ್ಬನೇ ಆಗಿರುತ್ತಾನೆ.

ಹಣ ಪಡೆಯಲು ಪ್ರಾಪ್ತಿಕರ್ತನಿಂದ ಹಿಂಬರಹದ ಮೂಲಕ ನಿರ್ದೇಶಿಸಲ್ಪಟ್ಟ ವ್ಯಕ್ತಿ ಹಿಂಬರಹಗೊಂಡವನು ಎನಿಸುತ್ತಾನೆ.

ತನ್ನ ಹೆಸರಿನಲ್ಲಿ ಚೆಕ್ಕಿನ ಸ್ವಾಧೀನ ಹೊಂದಿರಲು ಮತ್ತು ಬರಬೇಕಾದ ಮೊಬಲಗನ್ನು ಚೆಕ್ಕಿನ ಕಕ್ಷಿಗಾರರಿಂದ ಪಡೆ ಯಲು ಅಥವಾ ವಸೂಲು ಮಾಡಲು ಹಕ್ಕು ಹೊಂದಿರು ವವನು ಚೆಕ್ಕಿನ 'ಧಾರಕ' ಎನಿಸುತ್ತಾನೆ.

ತಾನು ಯಾರಿಂದ ಹಕ್ಕನ್ನು ಪಡೆಯುತ್ತಾನೋ ಅವರ ಹಕ್ಕಿನಲ್ಲಿ ಯಾವುದೇ ಲೋಪ ಇರುವುದೆಂದು ನಂಬಲು ಸಾಕಷ್ಟು ಕಾರಣವಿಲ್ಲದೆ, ಚೆಕ್ಕಿನಲ್ಲಿ ಹೇಳಲಾದ ಮೊಬಲಗು ಪಾವತಿಯುಕ್ತವಾಗುವ ಮೊದಲು ವಾಹಕ ಚೆಕ್ಕಿನ ಸ್ವಾಧೀನ ತೆಯನ್ನು ಪಡೆದ ಅಥವಾ ಆದೇಶ ಚೆಕ್ಕಿನ ಪ್ರಾಪ್ತಿಕರ್ತ ಅಥವಾ ಹಿಂಬರಹಗೊಂಡ ವ್ಯಕ್ತಿ ಅನುಧಾರಕ ಎನಿಸುತ್ತಾನೆ.

**ಅಪ್ರಾಪ್ತವಯಸ್ಕರು ಮತ್ತು ಚೆಕ್ಕು**

ತಾನು ಒಳಪಡುವ ಕಾನೂನಿನನ್ವಯ ಕರಾರು ಮಾಡಿ ಕೊಳ್ಳಲು ಅರ್ಹನಾದ ಪ್ರತಿಯೊಬ್ಬ ವ್ಯಕ್ತಿಯೂ ಚೆಕ್ಕನ್ನು ರಚಿಸಬಹುದು, ಹಿಂಬರಹ ಮಾಡಬಹುದು ಅಥವಾ ಪ್ರಾಪ್ತಿ ಕರ್ತನಾಗಿ/ಅನುಧಾರಕನಾಗಿ ತನ್ನ ಹಕ್ಕು ಸಾಧಿಸಬಹುದು.

ಅಪ್ರಾಪ್ತವಯಸ್ಕನೊಬ್ಬ ಚೆಕ್ಕನ್ನು ರಚಿಸುವ, ಹಿಂಬರಹ ಮಾಡುವ ಅಥವಾ ಹಸ್ತಾಂತರ ಮಾಡುವ ಮೂಲಕ ತನ್ನನ್ನುಳಿದು ಸಂಲೇಖದ ಎಲ್ಲ ಕಕ್ಷಿಗಳನ್ನೂ ಬದ್ಧರ ನ್ನಾಗಿಸಬಹುದು.

ಅದೇ ರೀತಿ ಯಾವುದೇ ಕಾನೂನು ಅಡಚಣೆಯಿಲ್ಲದೆ ಅಪ್ರಾಪ್ತವಯಸ್ಕನೊಬ್ಬ ಚೆಕ್ಕೊಂದರ ಪ್ರಾಪ್ತಿಕರ್ತನಾಗ ಬಹುದು.

# ಕೆನರಾ ಬ್ಯಾಂಕ್: ಎಪ್ಪತ್ತೈದು ವರ್ಷಗಳ ಸೇವೆ-ಸಾಧನೆ

ಎಚ್. ಜಿ. ಸೋಮಶೇಖರ ರಾವ್

'ಒಂದು ಒಳ್ಳೆಯ ಬ್ಯಾಂಕು ಸಮಾಜದ ಆರ್ಥಿಕ ಹೃದಯವಷ್ಟೇ ಅಲ್ಲ. ದೇಶದ ಜನಸಮುದಾಯವನ್ನು ಏಳಿಗೆ ಹಾಗೂ ಅಭ್ಯುದಯದ ಕಡೆಗೆ ಒಯ್ಯುವ ಪವಿತ್ರ ಕರ್ತವ್ಯವನ್ನೂ ಅದು ಮಾಡಬೇಕು.' ಇದು ಕೆನರಾ ಬ್ಯಾಂಕಿನ ಸ್ಥಾಪಕರಾದ ಶ್ರೀ ಸುಬ್ಬರಾಯ ಪೈ ಅವರು ಬಹಳ ಹಿಂದೆ ಹೇಳಿದ ಮಾತು. 'ಸೇವೆಗಾಗಿ ಅಭ್ಯುದಯ ಮತ್ತು ಅಭ್ಯುದಯಕ್ಕಾಗಿ ಸೇವೆ' ಎಂಬ ಆದರ್ಶದಿಂದ ಹುಟ್ಟಿಕೊಂಡ ಕೆನರಾ ಬ್ಯಾಂಕು ಇಲ್ಲಿಯವರೆಗೆ 75 ವರ್ಷಗಳ ಸಮಾಜ ಸೇವೆಯಿಂದ ಒಂದು ದಾಖಲೆ ಸ್ಥಾಪಿಸಿದೆ.

ದಕ್ಷಿಣ ಕನ್ನಡ ಜಿಲ್ಲೆ ಪಶ್ಚಿಮ ಕರಾವಳಿಯ ಬದಿಯಲ್ಲಿ, ಹರಿಯುವ ನದಿಗಳಿಂದ, ಪ್ರಕೃತಿಯ ಸೌಂದರ್ಯದಿಂದ ತುಂಬಿದೆ. ಎಲ್ಲಾ ದಿಕ್ಕುಗಳಲ್ಲೂ ಹಚ್ಚ ಹಸಿರು ಹಾಸಿಗೆ; ತೆಂಗಿನ ತೋಟಗಳು, ಬತ್ತದ ಹೊಲಗಳು. ಶ್ರೀಮತಿ ಸರೋಜಿನಿ ನಾಯ್ಡು ಅವರು ದಕ್ಷಿಣ ಕನ್ನಡ ಜಿಲ್ಲೆಯನ್ನು ನಮ್ಮ ದೇಶದ 'ನಂದನವನ' ಎಂದು ಕರೆದಿದ್ದಾರೆ. ಈ ಜಿಲ್ಲೆ ತನ್ನದೇ ಆದ ಭವ್ಯ ಮತ್ತು ಸಮೃದ್ಧ ಸಂಸ್ಕೃತಿಯನ್ನು ಬೆಳೆಸಿಕೊಂಡು ನಮ್ಮ ನಾಡಿಗೆ ಅದ್ಭುತ ಕಲಾವಿದರನ್ನು, ವಿದ್ವಾಂಸರನ್ನು, ಸಂಶೋಧಕರನ್ನು ಕೊಟ್ಟಿದೆ. ಈ ಜಿಲ್ಲೆ ಕನ್ನಡದ ಪತ್ರಿಕೋದ್ಯಮಕ್ಕೆ ಕೊಟ್ಟ ಕೊಡುಗೆ ವಿಶಿಷ್ಟವಾದುದು. ಸ್ವಾತಂತ್ರ್ಯ ಸಮರದಲ್ಲೂ ಈ ಜಿಲ್ಲೆಯ ಪಾತ್ರ ಉಲ್ಲೇಖಾರ್ಹ. ಬಣ್ಣ ಬಣ್ಣದ ಪೋಷಾಕು ಹಾಗೂ ಕುಣಿತಗಳಿಂದ ತುಂಬಿದ ಯಕ್ಷಗಾನಕ್ಕೆ ಈ ಜಿಲ್ಲೆ ತವರುಮನೆ.

## ಜನ್ಮ

1906ರಲ್ಲಿ ಮಂಗಳೂರು ನಗರದಲ್ಲಿ ಕೆನರಾ ಬ್ಯಾಂಕ್ ಸಣ್ಣದಾಗಿ ಹುಟ್ಟಿತು. ಆ ಕಾಲಕ್ಕೆ ಯುವಜನಾಂಗದಲ್ಲಿ ನಿರುದ್ಯೋಗ ತಾಂಡವವಾಡುತ್ತಿತ್ತು. ವಿದ್ಯಾಭ್ಯಾಸಕ್ಕೆ ಸಾಕಷ್ಟು ಅವಕಾಶಗಳಿಲ್ಲದೆ ಜನರ ಆರ್ಥಿಕ ಪರಿಸ್ಥಿತಿ ಆತಂಕಕಾರಿಯಾಗಿತ್ತು. ವ್ಯಾಪಾರಿಗಳಿಗೆ ಹಣದ ಕೊರತೆಯಿಂದ ತಮ್ಮ ವ್ಯಾಪಾರದ ಬಡಾವಣೆ ಕಷ್ಟಕರವಾಗಿತ್ತು. ಆಗ ಶ್ರೀ ಎ. ಸುಬ್ಬರಾಯ ಪೈ ಅವರ ನೇತೃತ್ವದಲ್ಲಿ ಹಲವಾರು ವಿದ್ಯಾವಂತ ಸಮಾಜಸೇವಕರು ಸಾರ್ವಜನಿಕ ಸೇವೆಗಾಗಿ ಪಣ ತೊಟ್ಟರು. ಆಗ ಸ್ವಾತಂತ್ರ್ಯ ಚಳವಳಿಯೂ ಅಲ್ಲಲ್ಲಿ ಹುಟ್ಟಿಕೊಂಡಿತ್ತು. ವಿದ್ವಾಂಸರೂ ಶ್ರೇಷ್ಠಮಟ್ಟದ ವಕೀಲರೂ ಉತ್ತಮ ವಾಗ್ಮಿಗಳೂ ಆಗಿದ್ದ ಸುಬ್ಬರಾಯ ಪೈ ಅವರು ತಮ್ಮ ಸೇವಾಮನೋಭಾವದ ಮೂಲಕ ಮಂಗಳೂರಿನ 'ಪುಣ್ಯಮೂರ್ತಿ' ಎಂದು ಜನಗಳಿಂದ ಪೂಜಿಸಲ್ಪಟ್ಟರು.

1906ರ ಜುಲೈ 1ರಂದು ಶ್ರೀ ಸುಬ್ಬರಾಯ ಪೈ ತಮ್ಮ ಕೆಲವೇ ಸ್ನೇಹಿತರ ನೆರವಿನಿಂದ 'ಕೆನರಾ ಹಿಂದು ಪರ್ಮನೆಂಟ್ ಫಂಡ್ ಲಿಮಿಟೆಡ್' ಎಂಬ ಸಂಸ್ಥೆಯನ್ನು ಒಂದು ಸಣ್ಣ ಬಾಡಿಗೆಯ ಮನೆಯಲ್ಲಿ, ತಲಾ 50 ರೂಪಾಯಿಗಳ 2 ಸಾವಿರ ಷೇರುಗಳ ಕೂಡಿಸಿದ ಮೂಲಧನದಿಂದ ಮಂಗಳೂರಿನಲ್ಲಿ ಸ್ಥಾಪಿಸಿದರು. ಹಾಗೆಯೇ ಕೆನರಾ ಹೈಸ್ಕೂಲು ಮತ್ತು ಕೆನರಾ ಗರ್ಲ್ಸ್ ಎಲಿಮೆಂಟರಿ ಸ್ಕೂಲುಗಳನ್ನು ಆರಂಭಮಾಡಿದರು. ಈ ಬ್ಯಾಂಕಿನ ಸ್ಥಾಪಕರು ಎತ್ತಿನ ಗಾಡಿಗಳಲ್ಲಿ ಸುತ್ತಲ ಹಳ್ಳಿಗಳಲ್ಲಿ ಸಂಚರಿಸಿ ತಮ್ಮ ಸಂಸ್ಥೆಯ ಬಗ್ಗೆ ಪ್ರಚಾರ ಮಾಡಿ ಎಲ್ಲ ಕ್ಷೇತ್ರದ ಜನಗಳಿಂದ ವಂತಿಗೆಗಳನ್ನು ಶೇಖರಿಸಿದರು. ದಕ್ಷಿಣ ಕನ್ನಡ ಜಿಲ್ಲೆಗೆ ಇದೇ ಪ್ರಾಯಶಃ ಮೊದಲನೆಯ ಜಾಯಿಂಟ್-ಸ್ಟಾಕ್ ಕಂಪನಿ ಎಂದು ಹೇಳಬಹುದು. ಸಂಸ್ಥೆಯ ಮೊದಲ ಆಡಳಿತವರ್ಗದಲ್ಲಿ 24 ಜನ ನಿರ್ದೇಶಕರಿದ್ದರು. ಅವರೆಲ್ಲ ಜಿಲ್ಲೆಯ ವಿವಿಧ ಭಾಗಗಳಿಂದ ಬಂದವರೂ ವಿವಿಧ ಕ್ಷೇತ್ರಗಳನ್ನು ಪ್ರತಿನಿಧಿಸುವವರೂ ಆಗಿದ್ದರು.

ಜಿಲ್ಲೆಯ ವ್ಯಾಪಾರಿಗಳು ಊರಿನ ಸಾಹುಕಾರರಿಂದ ಅತಿ ಹೆಚ್ಚಿನ ಬಡ್ಡಿಯ ದರದ ಮೇಲೆ ಸಾಲವನ್ನು ತರಬೇಕಾಗಿತ್ತು. ಆ ಕಾಲಕ್ಕೆ ಆರ್ಥಿಕ ನೆರವು ನೀಡುವ ಯಾವ ಸಂಸ್ಥೆಗಳೂ ಇರಲಿಲ್ಲ. ಹಾಗಾಗಿ ಸುಬ್ಬರಾಯ ಪೈ ಅವರಿಂದ ಪ್ರಾರಂಭವಾದ ಈ ಸಂಸ್ಥೆ ಜನಗಳನ್ನು ಆಕರ್ಷಿಸಿತ್ತು. ಅಷ್ಟೇ ಅಲ್ಲ. ಅವರ ಪ್ರೀತಿ ವಿಶ್ವಾಸಗಳನ್ನು

ಗಳಿಸಿತ್ತು. ಸಮಾಜ ಸೇವೆಯನ್ನು ತನ್ನ ಮೂಲೋದ್ದೇಶವಾಗಿ ಹೊಂದಿದ ಈ ಸಂಸ್ಥೆಯ 'ಕ್ರತು ಶಕ್ತಿಯಾಗಿದ್ದ ಶ್ರೀ ಸುಬ್ಬರಾಯ ಪೈ 1909ರಲ್ಲಿ ದೈವಾಧೀನರಾದರು. ಈ ಸಾವು ಸಂಸ್ಥೆಗೆ ಒಂದು ದೊಡ್ಡ ಕೊಡಲಿಪೆಟ್ಟು. ಆದರೆ ಆದರ್ಶಗಳ ಭವ್ಯ ಬುನಾದಿಯ ಮೇಲೆ ಕಟ್ಟಿದ ಸಂಸ್ಥೆ ಎಂದೂ ನಶಿಸುವುದಿಲ್ಲ. 1910ರಲ್ಲಿ ಈ ಸಂಸ್ಥೆಯ ನಿರ್ದೇಶಕರು 'ಕೆನರಾ ಬ್ಯಾಂಕ್ ಲಿಮಿಟೆಡ್' ಸಂಸ್ಥೆಯನ್ನು ಪ್ರಾರಂಭ ಮಾಡಿದರು. ಬ್ಯಾಂಕಿಂಗ್ ವ್ಯವಹಾರವನ್ನು ಎಲ್ಲ ರೀತಿಯಿಂದಲೂ ಪ್ರಾರಂಭಿಸಿ ವರ್ಷ ವರ್ಷವೂ ತನ್ನ ಸೇವಾಕ್ಷೇತ್ರವನ್ನು ವಿಸ್ತರಿಸುತ್ತಾ ಈ ಬ್ಯಾಂಕು ತನ್ನ ಸ್ಥಾನಮಾನಗಳನ್ನು ಹೆಚ್ಚಿಸಿಕೊಂಡಿತು. ಗ್ರಾಹಕರ ಅಭಿವೃದ್ಧಿಯ ಮೂಲಕವೇ ಬ್ಯಾಂಕಿನ ಅಭಿವೃದ್ಧಿ ಸಾಧ್ಯ ಎಂಬ ಉದಾತ್ತ ಆದರ್ಶದ ಬುನಾದಿಯ ಮೇಲೆ ಸಂಸ್ಥೆ ಬೆಳೆಯುತ್ತಾ ಹೋಯಿತು. ಆಗ ಬ್ಯಾಂಕು ನಡಸುತ್ತಿದ್ದ ಹಳೆಯ ಮನೆಗೆ ಕೊಡುತ್ತಿದ್ದ ಬಾಡಿಗೆ ವರ್ಷಕ್ಕೆ ರೂ. 120 ಮಾತ್ರ! ಆಗ ಉಪಯೋಗಿಸುತ್ತಿದ್ದ ಸಣ್ಣ ತಿಜೋರಿ ಬೇರೊಬ್ಬರಿಂದ ಎರವಲು ತಂದದ್ದು.

### ಕಷ್ಟದ ದಿನಗಳು

ಬ್ಯಾಂಕಿನಂಥ ಹಣಕಾಸು ಸಂಸ್ಥೆ ಒಂದು ಸೂಕ್ಷ್ಮ ಬಳ್ಳಿಯಂತೆ. ನಂಬುಗೆಯ ನೀರೆರೆಯದೆ ಅದು ಎಂದೂ ಬೆಳೆಯಲಾರದು. ಏತನ್ಮಧ್ಯೆ ಬರಬಹುದಾದ ಎಲ್ಲ ಅಡ್ಡಿ-ಆತಂಕಗಳನ್ನೂ ಸಂಸ್ಥೆ ಧೈರ್ಯವಾಗಿ ಎದುರಿಸಬೇಕಾದ್ದು ಅನಿವಾರ್ಯ. ಅಂಥ ಕಷ್ಟದ ದಿನಗಳು ಎಲ್ಲ ಸಂಸ್ಥೆಗಳೂ ಒಂದಲ್ಲ ಒಂದು ಸಾರಿ ಅನುಭವಿಸಲೇಬೇಕಾಗುತ್ತದೆ. ಕೆನರಾ ಬ್ಯಾಂಕು ಇದಕ್ಕೆ ಹೊರತಾಗಲಿಲ್ಲ. ತನ್ನ ಜೀವನದ ಎರಡನೆಯ ದಶಕದ ಪ್ರಾರಂಭದ ದಿನಗಳಲ್ಲಿ ಎಲ್ಲ ರೀತಿಯ ಸಮಸ್ಯೆಗಳು ಎದುರಾದುವು. 1913–14ರಲ್ಲಿ ನೆಲ ಹತ್ತಿದ ಕೆಲವಾರು ಬ್ಯಾಂಕ್ ಸಂಸ್ಥೆಗಳು ಇತರ ಬ್ಯಾಂಕ್ ಸಂಸ್ಥೆಗಳಿಗೆ ಹೊಸ ಹೊಸ ಸಮಸ್ಯೆಗಳಿಗೆ ಎಡೆ ಮಾಡಿದುವು.

ಆದರೆ ಗ್ರಾಹಕರ ವಿಶ್ವಾಸ ನಂಬಿಕೆಗಳು ಕೆನರಾ ಬ್ಯಾಂಕಿನ ವಿಷಯದಲ್ಲಿ ಕುಂದಲಿಲ್ಲ. ಬ್ಯಾಂಕಿನ ನಿರ್ದೇಶಕರು ಸಮಸ್ಯೆಗಳಿಂದ ವಿಚಲಿತರಾಗಲಿಲ್ಲ. ಜನಸಾಮಾನ್ಯರಿಗೆ ಈ ಬ್ಯಾಂಕು 'ನಮ್ಮ ಬ್ಯಾಂಕು' ಅನ್ನಿಸಿತು.

### ಸರ್ವತೋಮುಖ ಪ್ರಗತಿ

1918ರ ಈಚೆಗೆ ಶ್ರೀ ಎ. ಶ್ರೀನಿವಾಸ ಪೈ ಬ್ಯಾಂಕಿನ ಅಧ್ಯಕ್ಷರಾದರು. ಅವರು ಪ್ರಸಿದ್ಧ ವಕೀಲರಾಗಿದ್ದರು. ಸುಮಾರು ಕಾಲು ಶತಮಾನ ಬ್ಯಾಂಕಿನ ವ್ಯವಹಾರಗಳನ್ನು ಅವರು ದೂರದೃಷ್ಟಿ, ಸಾಹಸ ಪ್ರವೃತ್ತಿ, ಸೇವಾ ಮನೋಭಾವದಿಂದ ಸಮರ್ಥವಾಗಿ ನಡೆಸಿಕೊಂಡು ಹೋದರು. 1926ರಿಂದ ಬ್ಯಾಂಕಿನ ಪ್ರಗತಿ ವೇಗಗತಿಯಲ್ಲಿ ಮುನ್ನಡೆಯಿತು. ಬ್ಯಾಂಕಿನ ಶಾಖೆಗಳು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಬೆಳೆದುವು. ಬ್ಯಾಂಕಿನ ಮೊದಲ ಶಾಖೆ ಪ್ರಾರಂಭವಾದ್ದು 1926ರಲ್ಲಿ—ಕಾರ್ಕಳದಲ್ಲಿ. ಬೊಂಬಾಯಿ ಶಾಖೆ 1928ರಲ್ಲಿ ಸ್ಥಾಪಿತವಾಯಿತು. 1945ರಲ್ಲಿ ಸುಮಾರು 9 ಶಾಖೆಗಳು ಹೊಸದಾಗಿ ಪ್ರಾರಂಭವಾದುವು. 1955ರ ಕೊನೆಗೆ 51 ಶಾಖೆಗಳಿದ್ದುವು. 1953ರಲ್ಲಿ ವಿಶೇಷ ವ್ಯವಹಾರ ಇಲಾಖೆಯನ್ನು ಪ್ರಾರಂಭಿಸಿ ಬ್ಯಾಂಕು ಹೊಸ ಹೆಜ್ಜೆಗೆ ಹಾದಿ ಮಾಡಿಕೊಟ್ಟಿತು. ಜನರಲ್ ಮ್ಯಾನೇಜರರ ಕಛೇರಿಯನ್ನು ಮಂಗಳೂರಿಂದ ಬೊಂಬಾಯಿಗೆ ಹಾಗೂ ಆಡಳಿತ ಕಛೇರಿಯನ್ನು ಬೆಂಗಳೂರಿಗೆ ವರ್ಗಾಯಿಸಲಾಯಿತು.

ರಾಷ್ಟ್ರಪತಿಗಳಾಗಿದ್ದ ದಿ. ಡಾ. ರಾಜೇಂದ್ರ ಪ್ರಸಾದರು 2–2–1959ರಂದು ಈಗಿನ ಆಡಳಿತ ಕಛೇರಿಯ ಪ್ರಾರಂಭೋತ್ಸವದಲ್ಲಿ ಭಾಗಿಗಳಾಗಿದ್ದರು. 1960ರಿಂದ ಕೆನರಾ ಬ್ಯಾಂಕು ತನ್ನ ಹುಟ್ಟು ಊರಿನಿಂದ ನಾಡಿನ ಎಲ್ಲ ಕಡೆ ಹರಡುತ್ತ ಒಂದು ರಾಷ್ಟ್ರಮಟ್ಟದ ಎತ್ತರಕ್ಕೆ ಏರಿ ನಿಂತಿತು. ಉತ್ತರದ ನಾನಾ ಭಾಗಗಳಿಗೆ ತನ್ನ ವ್ಯವಹಾರಗಳನ್ನು ಪಸರಿಸುತ್ತ ಅನೇಕ ಭಾಗಗಳಲ್ಲಿ 'ಅಗ್ರ ಬ್ಯಾಂಕ್' ಆಗಿ ಕೆಲಸ ಮಾಡುತ್ತ, ಸಾಮಾಜಿಕ ಉದ್ದೇಶಗಳನ್ನು ಪೂರೈಸುತ್ತ 1974ರಲ್ಲಿ ನಮ್ಮ ದೇಶದ ಬ್ಯಾಂಕುಗಳಲ್ಲಿ ಐದನೆಯ ಸ್ಥಾನವನ್ನು ಗಳಿಸಿತು. ದೇಶ ವಿದೇಶಗಳಲ್ಲಿ ಕೆನರಾ ಬ್ಯಾಂಕು ತನ್ನ ಕಾರ್ಯ ಚಟುವಟಿಕೆಗಳಿಂದ ಒಳ್ಳೆಯ ಸ್ಥಾನ–ಮಾನಗಳನ್ನು ಗಳಿಸಿದೆ.

### ಸೇವೆಯೇ ಮೂಲಾಧಾರ

ದೇಶದ ಜನರೇ ಬ್ಯಾಂಕಿನ ಆಸ್ತಿ. ಅವರಿಗಾಗಿ ಮತ್ತು ಅವರ ಹಣದ ವೃದ್ಧಿಗಾಗಿ ಬ್ಯಾಂಕುಗಳೆಲ್ಲ ಶ್ರಮಿಸುತ್ತವೆ. ಕೆನರಾ ಬ್ಯಾಂಕಿಗೆ ಎಲ್ಲದಕ್ಕಿಂತ, ಎಲ್ಲರಿಗಿಂತ ಮುಖ್ಯವಾದ್ದು ಗ್ರಾಹಕರು. ಅವರನ್ನು ಅವರು ನಡೆಸುವ ವ್ಯವಹಾರಕ್ಕಾಗಿ ಬ್ಯಾಂಕು ಪ್ರೀತಿಸುವುದಿಲ್ಲ; ಅವರೆಲ್ಲರ ಸುಖಕ್ಕಾಗಿ, ನೆಮ್ಮದಿಗಾಗಿ, ಕ್ಷೇಮಾಭಿವೃದ್ಧಿಗಾಗಿ ದುಡಿಯಲು ಗ್ರಾಹಕರು ದೊರಕಿಸುವ ಅವಕಾಶಕ್ಕಾಗಿ. ಈ 75 ವರ್ಷಗಳಲ್ಲಿ ಸೇವೆಯನ್ನೇ ಮೂಲಾಧಾರವಾಗಿಟ್ಟುಕೊಂಡು ಕೆನರಾ ಬ್ಯಾಂಕು ತನ್ನದೇ ಆದ ವಿಶಿಷ್ಟ ಸಂಸ್ಕೃತಿಯನ್ನು ಬೆಳೆಸಿಕೊಂಡಿದೆ.

ಯಾರಿಗೂ ಸುಲಭವಾಗಿ ಕಾಣದಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಣ್ಣದಾಗಿ ಹುಟ್ಟಿ, ಬಾಹ್ಯ ಪ್ರಪಂಚದ ಹೆಚ್ಚು ಸಂಪರ್ಕವಿಲ್ಲದೆ, ಪುಟ್ಟ ಪುಟ್ಟ ಹೆಜ್ಜೆಗಳನ್ನಿಡುತ್ತ ನಿನ್ನೆಯ ಪುಟ್ಟ ಬ್ಯಾಂಕು ಇಂದು ದೊಡ್ಡದಾಗಿ ಬೆಳೆದಿದೆ. ಸಮಾಜದಿಂದ ತನ್ನ ಶಕ್ತಿಯನ್ನು ಪಡೆಯುವ ಬ್ಯಾಂಕು ಆ ಸಮಾಜಕ್ಕೆ ಋಣಿಯಾಗಿದ್ದು ತನ್ನೆಲ್ಲ ಸಾಧನ ಸಂಪತ್ತುಗಳನ್ನೂ ಜನ ಸಮುದಾಯದ ಶ್ರೇಯೋಭಿವೃದ್ಧಿಗೆ

ಉಪಯೋಗಿಸಬೇಕಾದ್ದು ಧರ್ಮ. ಗ್ರಾಮೀಣ ಅಭಿವೃದ್ಧಿಗಾಗಿ ಬ್ಯಾಂಕು ಶ್ರಮಿಸುತ್ತಿದ್ದು ಕೆನರಾ ಬ್ಯಾಂಕು ಚಿಕ್ಕ ಪುಟ್ಟವರ ಬ್ಯಾಂಕು ಎಂಬ ಹೆಸರನ್ನು ಗಳಿಸಿ ಉಳಿಸಿಕೊಂಡಿದೆ. 'ಜ್ಯೂಬಿಲಿ ಎಜುಕೇಷನ್ ಫಂಡ್' ಪ್ರಾರಂಭಿಸಿ ಅದರ ವತಿಯಿಂದ ವಿದ್ಯಾರ್ಥಿಗಳಿಗೆ ಅನೇಕ ರೀತಿಯಲ್ಲಿ ಸಹಾಯಕವಾಗಿದೆ. ನಾಲ್ಕು ಜನ ಉದ್ಯೋಗಸ್ಥರಿಂದ ಪ್ರಾರಂಭವಾದ ಈ ಬ್ಯಾಂಕು ಬೃಹತ್ತಾಗಿ ಬೆಳೆದು ರಾಷ್ಟ್ರದ ಎಲ್ಲ ಕಡೆಗಳಲ್ಲೂ ತನ್ನ ಶಾಖೆಗಳ ಮೂಲಕ ಗ್ರಾಹಕರ ಸೇವೆ ಮಾಡುತ್ತಿದೆ.

ಸಮಾಜ ಸೇವೆಯಲ್ಲಿ ಕೆನರಾ ಬ್ಯಾಂಕು ಗಣನೀಯ ಕಾರ್ಯ ಮಾಡಿದೆ. 1969ರಲ್ಲಿ 'ಮಾತೃ ಛಾಯ' ಪ್ರಾರಂಭಿಸಿ ನಿರಾಶ್ರಿತ ಮಕ್ಕಳ ಪೋಷಣೆ ಲಾಲನೆಗಳನ್ನು ಮಾಡುತ್ತ ಬಂದಿದೆ. 'ಸೇವಾಕ್ಷೇತ್ರ' ಎಂಬ ಆಸ್ಪತ್ರೆಯನ್ನು ಪರೋಕ್ಷವಾಗಿ ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಹೊತ್ತಿದೆ.

ಹೀಗೆ ಕೆನರಾ ಬ್ಯಾಂಕಿನ ಇತಿಹಾಸ ಒಂದು ರೀತಿಯಲ್ಲಿ ವಿಶಿಷ್ಟವಾದುದು. ಏಕಪ್ರಕಾರವಾದ ಕ್ರಮಬದ್ಧ ಪ್ರಗತಿಪರ ಬೆಳವಣಿಗೆಯಿಂದ ರಾಷ್ಟ್ರಮಟ್ಟದ ಬ್ಯಾಂಕುಗಳಲ್ಲಿ ಪ್ರಮುಖ ಸ್ಥಾನ ದೊರಕಿಸಿಕೊಂಡಿದೆ. ಬ್ಯಾಂಕಿನ ಈ ಪ್ರಗತಿ ದೇಶಾಭಿಮಾನದ, ನಂಬುಗೆಯ, ಕರ್ತವ್ಯಪಾಲನೆಯ, ಶಿಸ್ತಿನ, ಕ್ರಮಬದ್ಧ ವ್ಯಾಪಾರಿ ಮನೋಭಾವದ ಒಂದು ಸುಂದರ ಹಾಗೂ ಉತ್ಸಾಹಕರ ಕತೆ.



## ಅನಿವಾಸಿ ವಿನಿಯೋಜನ ಕಂಪನಿಗಳು

ಅಮೆರಿಕದಲ್ಲಿರುವ ಅನಿವಾಸಿ ಭಾರತೀಯರು ಭಾರತದಲ್ಲಿ ವಿವಿಧ ಪರಿಯೋಜನೆಗಳಿಗೆ ನಿಧಿಗಳನ್ನು ಒದಗಿಸುವ ದೃಷ್ಟಿಯಿಂದ ಮತ್ತು ಉದಾರಗೊಂಡ ವಿನಿಯೋಜನ ನಿಯಮಗಳ ಸೌಲಭ್ಯವನ್ನು ಪಡೆಯಲು, ಎರಡು ವಿನಿಯೋಜನ ಕಂಪನಿಗಳನ್ನು ಸ್ಥಾಪಿಸಿದ್ದಾರೆ.

## ಅನುಸೂಚಿತ ಜನಾಂಗ ಅಭಿಕರಣಗಳ ಹೆಸರಿನಲ್ಲಿ ಉಳಿತಾಯ ಖಾತೆಗಳು

ರಾಜ್ಯಗಳು ಸ್ಥಾಪಿಸುವ ಅನುಸೂಚಿತ ಜನಾಂಗಗಳ ಅಭಿವೃದ್ಧಿ ಅಭಿಕರಣಗಳ ಹೆಸರಿನಲ್ಲಿ, ಬಡ್ಡಿಗಳಿಸುವ ಉಳಿತಾಯ ಖಾತೆಗಳನ್ನು ವಾಣಿಜ್ಯ ಬ್ಯಾಂಕುಗಳು ತೆರೆಯಬಹುದು. ಇದಕ್ಕೆ ರಿಸರ್ವ್ ಬ್ಯಾಂಕಿನ ಪೂರ್ವಾನುಮತಿ ಬೇಕಿಲ್ಲ.



# ಸಾಲಗಳ ವಸೂಲಾತಿಯಲ್ಲಿ ವಾಣಿಜ್ಯ ಬ್ಯಾಂಕುಗಳ ತೊಡಕುಗಳು ಹಾಗೂ ಸಮಸ್ಯೆಗಳು

ಎಂ. ಎಸ್. ಕಾಮತ್
ಪು. ರಾ. ಮುರಳೀಧರ್

ವಾಣಿಜ್ಯ ಬ್ಯಾಂಕುಗಳ ಅತ್ಯಂತ ಮುಖ್ಯ ಕಾರ್ಯವೆಂದರೆ ಜನಸಾಮಾನ್ಯರಿಂದ ಠೇವಣಿಗಳ ರೂಪದಲ್ಲಿ ಬಂದ ಹಣದಿಂದ ಸಾಲಗಳನ್ನು ನೀಡುವುದು. ಬ್ಯಾಂಕು ಅಧಿನಿಯಮಿತ ಸೇಕಡ ಪ್ರಮಾಣವನ್ನು ಉಳಿಸಿಕೊಂಡು ತನ್ನ ಒಟ್ಟು ಠೇವಣಿ ಹಣದಿಂದ ನೀಡಬಹುದಾದ ಸಾಲದ ಪರಿಮಾಣದ ಬಗ್ಗೆ ಭಾರತೀಯ ರಿಸರ್ವ್ ಬ್ಯಾಂಕು ವಿಧಿಸಿದ ಕೆಲವು ನಿರ್ಬಂಧಗಳಿವೆ. ಬ್ಯಾಂಕು ನೀಡಿದ ಮುಂಗಡಗಳು ಅದರ ಆಸ್ತಿಗಳು. ಅದು ಪಡೆದ ಠೇವಣಿಗಳು ಅದರ ಜವಾಬ್ದಾರಿಗಳು.

ಬ್ಯಾಂಕು ನೀಡಿದ ಪ್ರತಿಯೊಂದು ಸಾಲವೂ ನಿರ್ದಿಷ್ಟ ಕಂತುಗಳಲ್ಲಿ ಮರುಪಾವತಿಯಾಗಬೇಕು. ಇತರ ಯಾವುದೇ ವ್ಯವಹಾರದಂತೆ ಬ್ಯಾಂಕುಗಳ ವ್ಯಾಪಾರ ಸರಕು ಹಣ. ಮತ್ತು ಹೊಸ ಸಾಲಗಳನ್ನು ನೀಡುವುದು ಸಾಧ್ಯವಾಗುವಂತೆ ಅದು ಹಣದ ಸತತ ಹಾಗೂ ಶೀಘ್ರ ಪುನರ್ಚಾಲನೆಯ ಕಡೆ ಗಮನ ನೀಡಬೇಕಾಗುತ್ತದೆ. ಸಮ್ಮತ ಷರತ್ತುಗಳಿಗನುಗುಣವಾಗಿ ಪಾವತಿಯಾಗದಿರುವ ಸಾಲಗಳನ್ನು ಅಂಟಿಕೊಳ್ಳುವ ಮತ್ತು ಅವಧಿ ಮೀರಿದ ಸಾಲಗಳೆಂದು ಕರೆಯುತ್ತಾರೆ. ಸಾಲಗಾರ ವಿಫಲನಾದಾಗ ಅವನು ಕಂತುಗಳನ್ನು ಮಾತ್ರವಲ್ಲದೆ ಬಡ್ಡಿಯನ್ನೂ ಕಟ್ಟಲಾರದವನಾಗಿರುತ್ತಾನೆ. ನಿಯತಕಾಲಿಕವಾಗಿ ಸೇರಿಕೊಳ್ಳುವ ಬಡ್ಡಿಯಿಂದ ಸಾಲದ ಮೊತ್ತ ಮತ್ತೂ ಹೆಚ್ಚಾಗುತ್ತದೆ; ಮತ್ತು ಒಟ್ಟು ಬಾಕಿಯ ಮೊತ್ತ ಅಸಲಿನ ಹಣಕ್ಕಿಂತ ಹೆಚ್ಚಾಗುವ ಘಟ್ಟ ತಲುಪಲೂ ಬಹುದು.

ಸಾಲಗಳ ವಸೂಲಾತಿಯಲ್ಲಿ ಬ್ಯಾಂಕುಗಳು ಜಾಗರೂಕವಾಗಿರಬೇಕಾಗುತ್ತದೆ. ಸಾಲದ ಮಂಜೂರಾತಿಗೆ ಮುಂಚೆ ಬೆಲೆ ಕಟ್ಟುವಷ್ಟೇ ಮಂಜೂರಾತಿಯ ಅನಂತರದಲ್ಲಿ ಸಾಲವನ್ನು ಬೆಂಬತ್ತಿ ನಡೆಸುವ ಪರಿಶೀಲನೆಯೂ ಮುಖ್ಯವಾದುದು. ಸಾಲದ ವಸೂಲಾತಿ ಒಂದು ಕಲೆ. ಅದರಲ್ಲಿ ಮಕ್ಕಿಕಾಮಕ್ಕಿಯ ವಿಧಾನ ಯಾವುದೂ ಇಲ್ಲ. ಪ್ರತಿಯೊಂದು ವಹಿವಾಟಿನ ಸಂದರ್ಭಕ್ಕನುಗುಣವಾಗಿ ವಸೂಲಾತಿಗಾಗಿ ನಿಯೋಜಿಸಲಾದ ವ್ಯಕ್ತಿಯ ಕೌಶಲ ಹಾಗೂ ಸಾಮರ್ಥ್ಯಕ್ಕೆ ತಕ್ಕಂತೆ ವಸೂಲಾತಿಯ ಕ್ರಮ ಹಾಗೂ ವಿಧಾನಗಳು ವ್ಯತ್ಯಾಸವಾಗುತ್ತವೆ. ಸಾಲದ ವಸೂಲಾತಿಯಲ್ಲಿ ಎದುರಿಸಬೇಕಾಗುವ ಸಮಸ್ಯೆಗಳು ಅಸಂಖ್ಯ— ಅವು ಮಾನವೀಯ ಮಾತ್ರವಲ್ಲ, ಕಾನೂನಿಕ ಕೂಡ.

1 ಸಾಲಗಳನ್ನು ನೀಡುವಾಗ ಸಾಲಗಾರನ ವಿಳಾಸವನ್ನು ಬ್ಯಾಂಕುಗಳು ಗುರುತಿಸಿಕೊಳ್ಳುವ ಎಚ್ಚರಿಕೆ ವಹಿಸುತ್ತವೆ. ಸುಲಭವಾದ ಸಂವಹನ ವಿಧಾನವೆಂದರೆ ಅಂಚೆಯ ಮೂಲಕ ವಿಷಯ ರವಾನೆ. ಆದರೆ ನಾನಾ ಕಾರಣಗಳಿಂದಾಗಿ ತಿಳಿವಳಿಕೆ ಪತ್ರಗಳು ತಲುಪುವುದೇ ಇಲ್ಲ; ಅಥವಾ ಅವನ್ನು ಸಂಬಂಧಪಟ್ಟವರು ಸ್ವೀಕರಿಸಲು ನಿರಾಕರಿಸುತ್ತಾರೆ. ಬ್ಯಾಂಕುಗಳಿಗೆ ಮುನ್ಸೂಚನೆ ನೀಡದೆಯೇ ಸಾಲಗಾರರು ತಾವು ವಾಸಿಸುವ ಸ್ಥಳಗಳನ್ನು ಬಿಟ್ಟು ಹೋಗುವರು ಎಂಬುದು ಬಹುತೇಕ ಸಾಮಾನ್ಯವಾದ ಸಂಗತಿ. ಇದು ಬ್ಯಾಂಕಿನ ಬಗ್ಗೆ ಸಾಲಗಾರನ ಅಸಹಕಾರದ ಮೊದಲ ಹೆಜ್ಜೆಯ ಸೂಚನೆ. ಇದರಿಂದ ಬ್ಯಾಂಕ್ ಅಧಿಕಾರಿ ಜಾಗೃತನಾಗುತ್ತಾನೆ.

2 ಅನಂತರ ಬ್ಯಾಂಕು ವೈಯಕ್ತಿಕ ಸಂಪರ್ಕ ವಿಧಾನವನ್ನನುಸರಿಸುತ್ತದೆ; ಎಂದರೆ ಸಾಲಗಾರನನ್ನು ಮುಖತಃ ಭೇಟಿಯಾಗಿ ಅವನ ತೊಂದರೆಗಳನ್ನು ತಿಳಿಯುವುದು. ಸಾಲಗಾರ ಬ್ಯಾಂಕಿನ ಕಛೇರಿಯಿಂದ ಬಹು ದೂರದಲ್ಲಿ ವಾಸಿಸುತ್ತಿದ್ದಿರಬಹುದು. ಅವನನ್ನು ತಕ್ಷಣ ಭೇಟಿ ಮಾಡುವುದು ಕಷ್ಟವಾಗಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಈ ದೂರವನ್ನು ಬಹಳ ಕಷ್ಟದಿಂದ ಕ್ರಮಿಸಬೇಕಾಗುತ್ತದೆ, ಅನೇಕ ವೇಳೆ ನಡೆದೇ ಹೋಗಬೇಕಾಗುತ್ತದೆ. ಇದಕ್ಕೆ ಬಹಳ ಕಾಲ ಹಾಗೂ ಶ್ರಮ ಹಿಡಿಸುತ್ತದೆ.

ಇಷ್ಟೆಲ್ಲಾ ಮಾಡಿ, ಸಾಲಗಾರನ ವಾಸಸ್ಥಳವನ್ನು ತಲು ಪಿದರೂ ಅವನು ಸಿಗುತ್ತಾನೆಂಬ ಖಾತರಿ ಇರುವುದಿಲ್ಲ; ಮತ್ತು ಅವನನ್ನು ಮುಖತಃ ಭೇಟಿಯಾಗಲು ಹೀಗೆ ಪದೇ ಪದೇ ಅಲ್ಲಿಗೆ ಹೋಗುವುದು ಅಗತ್ಯವಾಗಬಹುದು.

3 ಸಾಲಗಾರನನ್ನು ಭೇಟಿಯಾದ ಮೇಲೆ ಮತ್ತೊಂದು ಘಟ್ಟ ಪ್ರಾರಂಭವಾಗುತ್ತದೆ. ಆ ಸಮಯದಲ್ಲಿ ಅವನ ಕೈಯಲ್ಲಿ ಹಣ ಇದ್ದ ಪಕ್ಷದಲ್ಲಿ ತನ್ನ ಬ್ಯಾಂಕಿಗಾಗಿ ಅದನ್ನವನು ಕೊಡಬಹುದು. ಹಣವಿಲ್ಲದಿದ್ದ ಪಕ್ಷದಲ್ಲಿ ತನ್ನ ಅನು ಕೂಲಕ್ಕೆ ತಕ್ಕ ಮುಂದಿನ ಎಂದೋ ಒಂದು ದಿನದಂದು ಪಾವತಿ ಮಾಡುವ ಯೋಜನೆ ಹಾಕಿಕೊಂಡು ಅದಕ್ಕನು ಗುಣವಾಗಿ ಮರುಪಾವತಿಯ ತಪಶೀಲೊಂದನ್ನು ನೀಡ ಬಹುದು. ಬ್ಯಾಂಕು ಅದನ್ನು ತಪ್ಪದೆ ಅನುಸರಿಸಬೇಕು ಹಾಗೂ ಪಾವತಿಯಾಗುವವರೆಗೆ ನಿಯತಕಾಲಿಕವಾಗಿ ತಿಳಿವಳಿಕೆ ಪತ್ರಗಳನ್ನು ಕಳುಹಿಸಬೇಕು. ಸಾಲದ ಖಾತೆಗಳ ಅನುಸರಣೆಯಲ್ಲೂ ಸಾಲಗಾರನ ಚಲನವಲನಗಳ ಮೇಲೆ ನಿಗಾ ವಹಿಸುವುದರಿಂದರಲೂ ಬ್ಯಾಂಕು ಅಧಿಕಾರಿಗಳು ಹೆಚ್ಚು ಶ್ರಮ ಹಾಗೂ ಆತಂಕಕ್ಕೆ ಒಳಗಾಗುತ್ತಾರೆ.

4 ಒಂದು ವೇಳೆ ಸಾಲಗಾರ ಅಸಹಕಾರ ತೋರು ತ್ತಿದ್ದು, ಉದ್ದೇಶಪೂರ್ವಕವಾಗಿ ಬಾಕಿ ಉಳಿಸಿಕೊಳ್ಳು ತ್ತಿದ್ದಾನೆಂಬುದು ಸಾಬೀತಾದಲ್ಲಿ ಬಲಾತ್ಕಾರದ ಕ್ರಮ ತೆಗೆದುಕೊಳ್ಳುವುದೇ ವಿನಾ ಬೇರೆ ಮಾರ್ಗವಿರುವುದಿಲ್ಲ. ಮೊದಲ ಹೆಜ್ಜೆಯೆಂದರೆ ಒತ್ತೆಯಿಟ್ಟ ಪ್ರತಿಭೂತಿಗಳನ್ನು ಬಾಕಿಯ ತೀರುವೆಗಾಗಿ ಬಳಸಿಕೊಳ್ಳಲು ಕ್ರಮ ಜರು ಗಿಸುವುದು. ಇಲ್ಲಿ ಕೂಡ ಪ್ರತಿಭೂತಿಗಳು ಎಂಥವು ಎಂಬುದರ ಮೇಲಿಂದ ಯುಕ್ತ ಕ್ರಮಗಳನ್ನು ರೂಪಿಸಿ ಕೊಳ್ಳಬೇಕಾಗುತ್ತದೆ. ಜಾನುವಾರು, ಬಳಕೆ ವಸ್ತು ಗಳು, ವಾಹನಗಳು, ಯಂತ್ರ, ವ್ಯಾಪಾರ ಸರಕು ಹಾಗೂ ಸಲಕರಣೆಗಳೇ ಮುಂತಾದ ಚರ ವಸ್ತುಗಳು, ಜಮೀನು ಕಟ್ಟಡ ಮುಂತಾದ ಸ್ಥಿರ ಆಸ್ತಿಗಳು ಸಾಮಾನ್ಯ ವಾಗಿ ಆಧಾರಗಳಾಗಿರುತ್ತವೆ. ಚರ ವಸ್ತುಗಳ ಮೇಲೆ ಬ್ಯಾಂಕು ಕ್ರಮ ಜರುಗಿಸುವುದು ಸಾಮಾನ್ಯವಾಗಿ ಹೆಚ್ಚು ಸುಲಭ; ಏಕೆಂದರೆ ಬ್ಯಾಂಕು ಅವನ್ನು ವಶಕ್ಕೆ ತೆಗೆದು ಕೊಂಡು ಬಹಿರಂಗ ಹರಾಜಿನ ಮೂಲಕ ಮಾರಬಹುದು. ಅಥವಾ ಖಾಸಗಿಯಾಗಿ ಮಾರಾಟ ಮಾಡಬಹುದು. ಆದರೆ ಸ್ಥಿರ ಆಸ್ತಿಗಳನ್ನು ಕಾನೂನಿನ ಯಥಾಪ್ರಕ್ರಿಯೆ ಯನ್ನನುಸರಿಸಿ ನ್ಯಾಯಾಲಯದ ಮೂಲಕವಲ್ಲದೆ ಖಾಸಗಿ ಯಾಗಿ ಮಾರಾಟ ಮಾಡುವುದನ್ನು ಕಾನೂನು ಪ್ರತಿ ಷೇಧಿಸುತ್ತದೆ.

5 ಚರ ಆಸ್ತಿಗಳನ್ನು ಸಾಮಾನ್ಯವಾಗಿ ಈಡಿನ ಮೂಲಕ ಆಧಾರವಾಗಿ ಇಟ್ಟುಕೊಳ್ಳಲಾಗಿರುತ್ತದೆ. ಮತ್ತು ಚರ ವಸ್ತುಗಳು, ಉಪಕರಣಗಳು ಸಾಮಾನ್ಯವಾಗಿ ಸಾಲಗಾರನ ವಶದಲ್ಲಿರುತ್ತವೆ. ಅವನ್ನು ವಶಪಡಿಸಿಕೊಳ್ಳಲು ಹಲವಾರು ಸಮಸ್ಯೆಗಳಿರುತ್ತವೆ. ಬಹಳಷ್ಟು ಸಂದರ್ಭಗಳಲ್ಲಿ ಸಾಲ ಗಾರರು ಈಡಾದ ಸರಕುಗಳನ್ನು ಬ್ಯಾಂಕಿಗೆ ತಿಳಿಸದೆಯೇ ಮಾರಿಬಿಟ್ಟಿರುತ್ತಾರೆ ಮತ್ತು ಅದರಿಂದ ಬಂದ ಹಣವನ್ನು ಬ್ಯಾಂಕಿಗೆ ಕಟ್ಟಿರುವುದಿಲ್ಲ. ಹಾಗೇ ಆ ಸರಕುಗಳನ್ನು ವಶಪಡಿಸಿ ಕೊಳ್ಳಲು, ಸಂಗ್ರಹಿಸಲು ಸಾಧ್ಯವಾದರೂ ಈ ನಿಟ್ಟಿನಲ್ಲೂ ಹಲವು ಸಮಸ್ಯೆಗಳು ಎದುರಾಗುತ್ತವೆ. ಉದಾಹರಣೆಗೆ, ವಶಪಡಿಸಿಕೊಂಡ ಟ್ರಕ್ಕನ್ನು ಭದ್ರವಾದ ಸ್ಥಳದಲ್ಲಿ ಇಡ ಬೇಕು. ವಶಪಡಿಸಿಕೊಂಡ ಯಂತ್ರೋಪಕರಣಗಳನ್ನು ಸುರಕ್ಷೆಯಾಗಿಡಲು ಗೋದಾಮು ಇರಬೇಕಾಗುತ್ತದೆ. ಅದೂ ಅಲ್ಲದೆ ಹೀಗೆ ವಶಪಡಿಸಿಕೊಂಡ ವಸ್ತುಗಳಿಂದ ಬಾಕಿಯನ್ನು ಪೂರ್ತಿ ಚುಕ್ತಾ ಮಾಡಲು ಅಗತ್ಯವಾದಷ್ಟು ಮೊಬಲಗು ಬರುತ್ತದೆಂದು ಯಾವಾಗಲೂ ಭಾವಿಸಲಾಗದು.

6 ವಶಪಡಿಸಿಕೊಂಡ ವಸ್ತುಗಳನ್ನು ಬ್ಯಾಂಕು ಸಾಮಾನ್ಯ ವಾಗಿ ಬಹಿರಂಗ ಮಾರಾಟದ ಮೂಲಕ ವಿಲೆ ಮಾಡುತ್ತದೆ. ಪತ್ರಿಕೆಗಳಲ್ಲಿ ಜಾಹೀರು ಮಾಡುವುದು, ಕೊಳ್ಳಬಯಸುವವರ ಬೆಲೆಗಳನ್ನು ಆಹ್ವಾನಿಸುವುದು, ವಸ್ತುಗಳ ಪ್ರದರ್ಶನದ ವ್ಯವಸ್ಥೆ ಮಾಡುವುದು ಮುಂತಾದ ವಿಶದವಾದ ಪ್ರಕ್ರಿಯೆ ಗಳನ್ನೂ ಸಾಮಾನ್ಯವಾಗಿ ಇದು ಒಳಗೊಳ್ಳುತ್ತದೆ. ಕೊಳ್ಳಲು ಉದ್ದೇಶ ಹೊಂದಿರುವವರಿಗೆ ಸರಕುಗಳನ್ನು ಪ್ರದರ್ಶಿಸಿ ಅತ್ಯಂತ ಹೆಚ್ಚಿನ ಬೆಲೆಯನ್ನು ಸೂಚಿಸಿದವನಿಗೆ ವಸ್ತುಗಳನ್ನು ಮಾರಬೇಕು. ಈ ರೀತಿಯ ಬಹಿರಂಗ ಮಾರಾಟದಿಂದ ಒಳ್ಳೆಯ ಬೆಲೆ ಬರಲು ಸಹಾಯವಾಗದು ಎಂಬ ಅನುಭವವೂ ಆಗಾಗ್ಗೆ ಆಗುತ್ತದೆ. ಮಾರು ಕಟ್ಟೆಯಲ್ಲಿ ಒಳ್ಳೆಯ ಬೆಲೆಯಲ್ಲಿರುವ ಸರಕುಗಳಿಗೂ ಕಡಿಮೆ ಬೆಲೆ ಸೂಚಿತವಾಗುತ್ತದೆ. ಈ ಪ್ರಕ್ರಿಯೆ ಕೇವಲ ತುತ್ತು ಕಟ್ಟಿನ ಮಾರಾಟವಾಗುತ್ತದೆ. ಆದರೆ ವಶಪಡಿಸಿಕೊಂಡ ಸರಕುಗಳನ್ನು ಮಾರಲು, ಮೊದಲು ವ್ಯಾಪಕ ಪ್ರಚಾರ ನೀಡಿರಬೇಕು ಮತ್ತು ಅವನ್ನು ಬಹಿರಂಗ ಹರಾಜಿನ ಮೂಲಕ ಮಾರಬೇಕು ಎಂಬುದಾಗಿ ಕಾನೂನಿನ ವಿಧಿ ಯಾಗಿರುವುದರಿಂದ ಬ್ಯಾಂಕುಗಳಿಗೆ ಬೇರೆ ಮಾರ್ಗವಿಲ್ಲ.

7 ಜಾನುವಾರುಗಳ ವಿಷಯದಲ್ಲಂತೂ ಅವನ್ನು ವಶ ಪಡಿಸಿಕೊಳ್ಳುವುದು ಅಸಾಧ್ಯ. ಏಕೆಂದರೆ ಮಾರಾಟ ಮಾಡುವವರೆಗೆ ಅವನ್ನು ನೋಡಿಕೊಳ್ಳುವ, ಮೇವು ಹಾಕುವ ಬಹು ದೊಡ್ಡ ಹೊಣೆ ಇರುತ್ತದೆ. ಈ ದೃಷ್ಟಿ ಯಿಂದ ಜಾನುವಾರುಗಳನ್ನು ಆಧಾರವಾಗಿ ಇಟ್ಟಿದ್ದ ಪಕ್ಷ ದಲ್ಲಿ ಕ್ರಮ ಜರುಗಿಸುವ ಪರಿಸ್ಥಿತಿ ಬಾರದಂತೆ ಬ್ಯಾಂಕು ಗಳು ಆದಷ್ಟು ಎಚ್ಚರ ವಹಿಸುತ್ತದೆ. ಹಾಗೆ ವಶಪಡಿಸಿ

ಕೊಳ್ಳಲೇಬೇಕಾಗಿದ್ದರೆ ಅವುಗಳ ಶೀಘ್ರ ವಿಲೇವಾರಿಗೆ ವ್ಯವಸ್ಥೆಯನ್ನು ಮುಂಚಿತವಾಗಿಯೇ ಮಾಡಿರಬೇಕಾಗುತ್ತದೆ.

8 ವಸ್ತುಗಳ ವಶೀಕರಣ, ದಾಸ್ತಾನು ಮತ್ತು ಜವಾಬ್ದಾರಿ— ಈ ಕೆಲಸದ ನಿರ್ವಹಣೆಗಾಗಿ ನಿಕಾಲೆ ಮುತಾಲಿಕರನ್ನು ಬ್ಯಾಂಕುಗಳು ನೇಮಿಸಿಕೊಳ್ಳುತ್ತವೆ. ನಿಕಾಲೆ ಮುತಾಲಿಕರು ತಮ್ಮ ಸೇವೆಗಾಗಿ ಶುಲ್ಕ ವಿಧಿಸುತ್ತಾರೆ. ಈ ಖರ್ಚನ್ನು ಸಾಲಗಾರರಿಂದ ವಸೂಲಿಯಾಗುವ ವರೆಗೆ ಬ್ಯಾಂಕುಗಳೇ ಭರಿಸಬೇಕಾಗುತ್ತದೆ. ವಸ್ತುಗಳ ಕಬ್ಜೆಯಿಂದ ಬ್ಯಾಂಕುಗಳಿಗೆ ಉಪಯೋಗವಿದೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಒಂದು ವೇಳೆ ಬೇಗನೆ ಅವುಗಳ ವಿಲೇವಾರಿಯಾಗದಿದ್ದಲ್ಲಿ ಅನಂತರದ ತೀರುವೆ ನಿಕಾಲೆ ಮುತಾಲಿಕರು ವಿಧಿಸುವ ಹೆಚ್ಚಿನ ಶುಲ್ಕವನ್ನು ಬ್ಯಾಂಕುಗಳು ಹೊರಬೇಕಾಗುತ್ತದೆ. ವಶಪಡಿಸಿಕೊಂಡ ಸರಕುಗಳು ಒಂದು ವೇಳೆ ಬ್ಯಾಂಕಿನ ಉಪೇಕ್ಷೆಯಿಂದಾಗಿ ಹಾನಿಗೊಳಗಾದರೆ, ಕ್ಷಯಿಸಿದರೆ ಆ ನಷ್ಟವನ್ನು ಭರಿಸಲು ಸಾಲಗಾರ ನಿರಾಕರಿಸಬಹುದು.

9 ಸಾಲದ ವಸೂಲಾತಿಯಲ್ಲಿ ಈ ಎಲ್ಲಾ ಮಾಮೂಲಿ ಪ್ರಯತ್ನಗಳು ವಿಫಲವಾದಲ್ಲಿ ದಾವೆ ಹೂಡುವ ಮೂಲಕ ಬ್ಯಾಂಕುಗಳು ಕಾನೂನು ಕ್ರಮ ತೆಗೆದುಕೊಳ್ಳುವುದು ಅನಿವಾರ್ಯವಾಗುತ್ತದೆ. ದಾವೆ ಹೂಡಿದ ಅನಂತರ ನ್ಯಾಯಾಲಯದ ಅನುಮತಿ ಇಲ್ಲದೆ ಅಥವಾ ಡಿಕ್ರಿಯ ನಿಬಂಧನೆಗಳಂತೆ ಅಲ್ಲದೆ ಬ್ಯಾಂಕುಗಳು ಪ್ರತಿಭೂತಿಗಳನ್ನು ಮಾರುವುದು ನಿಷಿದ್ಧ. ಸಾಮಾನ್ಯವಾಗಿ, ದಾವೆ ಇತ್ಯರ್ಥವಾಗದೆ ಉಳಿದಿರುವಾಗ ಬ್ಯಾಂಕುಗಳು ತೀರ್ಪಿನ ಮೊದಲು ಜಪ್ತಿಗಾಗಿ ಪ್ರಾರ್ಥನೆ ಸಲ್ಲಿಸುತ್ತವೆ. ಆದರೆ ಸಾಲಗಾರರು ಅವುಗಳಿಂದ ಜೀವನ ನಿರ್ವಹಣೆ ಮಾಡುತ್ತಿದ್ದರೆ ನ್ಯಾಯಾಲಯ ಇದಕ್ಕೆ ಸುಲಭವಾಗಿ ಒಪ್ಪಿಗೆ ನೀಡುವುದಿಲ್ಲ. ಒಂದು ವೇಳೆ ನೀಡಿದರೂ ಅಂತಿಮವಾಗಿ ಬ್ಯಾಂಕಿನ ಪರವಾಗಿ ದಾವೆ ಇತ್ಯರ್ಥವಾಗುವ ವೇಳೆಗೆ ಪ್ರತಿಭೂತಿಗಳು ಹಳೆಯವಾಗಿಯೋ, ಉಪಯೋಗಕ್ಕೆ ಬಾರದಂತೆಯೋ, ಕಸವಾಗಿಯೋ, ಕಳಪೆಯಾಗಿಯೋ ಪರಿಣಮಿಸಿರುತ್ತವೆ. ದಾವೆ ಇನ್ನೂ ಇತ್ಯರ್ಥವಾಗದೇ ಇರುವಾಗ ಪ್ರತಿಭೂತಿಗಳನ್ನು ಮಾರಲು ನ್ಯಾಯಾಲಯ ಸಾಮಾನ್ಯವಾಗಿ ಅನುಮತಿ ನೀಡುವುದಿಲ್ಲ.

10 ಡಿಕ್ರಿಯನ್ನು ಪಡೆದ ಅನಂತರ ಪ್ರತಿಭೂತಿಗಳನ್ನು ಜಾರಿಗಾಗಿ ಮಾರಾಟಕ್ಕೆ ತರಲು ಡಿಕ್ರಿಯ ಅಮಲ್ಜಾರಿ ವ್ಯವಹರಣೆ ಹೂಡಬೇಕಾಗುತ್ತದೆ. ಇದಕ್ಕೆ ಕೂಡ ಬಹಳ ಸಮಯ ಹಿಡಿಯುವುದಲ್ಲದೆ, ಪ್ರತಿಭೂತಿಗಳನ್ನು ಗುರುತಿಸುವ, ಅವುಗಳನ್ನು ವಶಪಡಿಸಿಕೊಳ್ಳುವ ಮತ್ತು ನ್ಯಾಯಾಲಯದಿಂದ ಅವುಗಳಿಗೆ ಜಪ್ತಿ ಆಜ್ಞೆಯನ್ನು ತರುವ ಹೊಣೆ ಬ್ಯಾಂಕಿನ ಮೇಲೆ ಬಿದ್ದು, ಎರಡೂ ಕಡೆಯವರಿಗೆ ಮಾರಾಟದ ನೋಟೀಸು ಕೊಟ್ಟು ಅನಂತರ ನ್ಯಾಯಾಲಯದ ಮೂಲಕ ಮಾರಬೇಕಾಗುತ್ತದೆ. ಈ ಎಲ್ಲ ಪ್ರಕ್ರಿಯೆಗೆ ಬಹಳ ಸಮಯ ಹಿಡಿಯುವುದು ಮತ್ತು ಬೇಸರ ಉಂಟು ಮಾಡುವುದು. ಮುಂಚೆಯೇ ಪ್ರತಿಭೂತಿಗಳ ವಿಲೇವಾರಿ ಆಗಿರುವುದರಿಂದ, ಅದು ಕ್ಷಯಿಸಿರುವುದರಿಂದ, ಹಾನಿಗೊಂಡಿರುವುದರಿಂದ, ಕಳಪೆಯದಾಗಿ ಕಸದ ಮೌಲ್ಯಕ್ಕೆ ಇಳಿದಿರುವುದರಿಂದ ಪ್ರತಿಭೂತಿಗಳನ್ನು ನ್ಯಾಯಾಲಯದ ಮೂಲಕ ಮಾರಾಟಕ್ಕೆ ತರುವುದು ಬಹುತೇಕ ಅಸಾಧ್ಯ. ನ್ಯಾಯಾಲಯ ಕೇವಲ ಕಾನೂನಿನ ನಿರ್ದೇಶನಗಳನ್ನು ಕೊಡುತ್ತದೆಯೇ ವಿನಾ ಪ್ರತಿಭೂತಿಗಳ ರಕ್ಷಣೆ ಹಾಗೂ ಭದ್ರತೆಯ ಬಗ್ಗೆ ಭರವಸೆ ನೀಡುವುದಿಲ್ಲ. ಮತ್ತು ಸಾಲಗಾರನ ವಂಚನೆಯ ಹೂಟಗಳ ವಿರುದ್ಧ ನ್ಯಾಯಾಲಯದ ಪ್ರಕ್ರಿಯೆಗಳು, ವಿಧಿವಿಧಾನಗಳು ಮತ್ತು ಇತರ ಕಾನೂನಿಕ ಅಪೇಕ್ಷಿತಗಳ ಭಾರವನ್ನು ಬ್ಯಾಂಕುಗಳು ಹೊರಲೇಬೇಕಾಗುತ್ತದೆ. ಬ್ಯಾಂಕುಗಳಿಗೆ ಇದು ತುರ್ತಾಗಿರಬಹುದು. ಆದರೆ ಅದು ನ್ಯಾಯಾಲಯಗಳ ಕಾಳಜಿಯಿಲ್ಲ. ನ್ಯಾಯಾಲಯಗಳು ಕಾನೂನಿನ ಪ್ರಕ್ರಿಯೆಗಳಿಗೆ ಅನುಗುಣವಾಗಿ ವರ್ತಿಸುತ್ತವೆ. ಶೀಘ್ರ ವಸೂಲಾತಿಯ ವಿಚಾರದಲ್ಲಿ ಬ್ಯಾಂಕುಗಳ ನೆರವಿಗೆ ನ್ಯಾಯಾಲಯಗಳು ಬಾರವು.

11 ಇನ್ನು ಸ್ಥಿರಾಸ್ತಿಗಳ ವಿಷಯದಲ್ಲಿ ಕಾರ್ಯವಿಧಾನ ಹೆಚ್ಚು ಕ್ಲಿಷ್ಟಕರ. ವಿಮೋಚನ ನಿರೋಧಕ್ಕಾಗಿ ದಾವೆ ಹೂಡಿದ ಅನಂತರ ಬಾಕಿಯ ಪಾವತಿಗಾಗಿ ಸುಮಾರು ಆರು ತಿಂಗಳ ಕಾಲಾವಕಾಶವನ್ನು ನೀಡುವ ಪ್ರಾರಂಭಿಕ ಡಿಕ್ರಿಯನ್ನು ಬ್ಯಾಂಕಿಗೆ ನೀಡಲಾಗುತ್ತದೆ. ಒಂದು ವೇಳೆ ಹಣ ಪಾವತಿಯಾಗದಿದ್ದಲ್ಲಿ, ಬ್ಯಾಂಕು ಅಂತಿಮ ಡಿಕ್ರಿಗಾಗಿ ಪ್ರಾರ್ಥಿಸಬೇಕು. ಅನಂತರ ಅಮಲ್ಜಾರಿ ವ್ಯವಹರಣೆಯಿಂದ ಮಾರಾಟದ ನೋಟೀಸು, ಮಾರಾಟದ ಉದ್ಘೋಷಣೆ ಮತ್ತು ಅಂತಿಮವಾಗಿ ಕೋರ್ಟಿನ ಅಮೀನನ ಮೂಲಕ ಪ್ರತಿಭೂತಿಯನ್ನು ಮಾರಾಟಕ್ಕೆ ತರಬೇಕು. ಮಾರಾಟದ ಅನಂತರವೂ ಸಾಲಗಾರನಿಗೆ ಬಾಕಿಯನ್ನು ಪಾವತಿ ಮಾಡಲು ಕಾಲಾವಕಾಶ ನೀಡಲಾಗುತ್ತದೆ. ಮತ್ತು ಹದಿನೈದು ದಿನಗಳ ಅನಂತರವೇ ಮಾರಾಟವನ್ನು ಸ್ಥಿರೀಕರಿಸಲಾಗುತ್ತದೆ. ಮಾರಾಟವನ್ನು ಬದಿಗೊತ್ತಲು ಸಾಲಗಾರನಿಗೆ ಕಾನೂನಿನನ್ವಯ ಮಾರ್ಗಗಳು ತೆರೆದಿರುತ್ತವೆ. ಸಾಲಗಾರನ ಅಗತ್ಯಕ್ಕೆ ಹೊಂದಿಕೊಳ್ಳುವಂತೆ ಹೊಸದಾಗಿ ಮಾರಾಟದ ಆಜ್ಞೆ ಮಾಡಿರುವುದು ಬ್ಯಾಂಕಿನ ಅನುಭವಕ್ಕೆ ಬಂದಿರುವುದುಂಟು. ಕೆಲವು ಬಾರಿ ನ್ಯಾಯಾಲಯದಿಂದ ಮಾರಾಟಕ್ಕೆ ನಿಗದಿಯಾದ ದಿನದಂದು ಸಾಕಷ್ಟು ಬಿಡ್ಡುದಾರರೇ ಇರುವುದಿಲ್ಲ. ಮತ್ತು ಇಡೀ ಮಾರಾಟದ ಕ್ರಮವನ್ನು ಬ್ಯಾಂಕು ಮತ್ತೆ ನಡೆಸಬೇಕಾಗುತ್ತದೆ.

ಗ್ರಾಮೀಣ ಪ್ರದೇಶಗಳಲ್ಲಿ ಕೋರ್ಟು ಮಾರಾಟವನ್ನು ಅಡ್ಡಿಪಡಿಸಬಲ್ಲ, ಅಮೀನನನ್ನು ಗೆಲ್ಲುವ ಮತ್ತು ಮಾರಾಟವನ್ನು ಪ್ರಾಯೋಗಿಕವಾಗಿ ಅಸಾಧ್ಯಗೊಳಿಸಬಲ್ಲ ರಾಜಕೀಯ ಪ್ರಭಾವಿತರನ್ನು ಬ್ಯಾಂಕುಗಳು ಎದುರಿಸಬೇಕಾಗುತ್ತದೆ. ಡಿಕ್ರಿಯನ್ನು ಪಡೆದ ಅನಂತರವೂ ವಸೂಲಾತಿಯ ಖಾತರಿ ಇರುವುದಿಲ್ಲವಾದ್ದರಿಂದ ಇವೆಲ್ಲವೂ ಬ್ಯಾಂಕುಗಳು ಹಾಗೂ ನ್ಯಾಯಾಲಯದ ದೀರ್ಘಕಾಲದ ವ್ಯಾಜ್ಯದಲ್ಲಿ ಸೇರಿರುತ್ತವೆ.

12 ಇದರಿಂದ ಸಾಲಗಳ ವಸೂಲಾತಿಯಲ್ಲಿ ಬ್ಯಾಂಕುಗಳು ಅನೇಕ ತೊಂದರೆಗಳನ್ನು ಎದುರಿಸುತ್ತದೆಂಬುದು ಸ್ಪಷ್ಟ. ಬಿನ್ನಕ ಬಡ್ಡಿ ದರ, ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಮುಂತಾದ ಸರ್ಕಾರದಿಂದ ಸಂಚಾಲಿತವಾದ ಸಾಲಗಳನ್ನು ಬ್ಯಾಂಕುಗಳು ಸರ್ಕಾರದ ಒತ್ತಡದಿಂದ ನೀಡಿದರೂ ಈ ಹೆಚ್ಚು ಸಂಖ್ಯೆಯ ಸಾಲಗಳ ವಸೂಲಾತಿಗೆ ಸರ್ಕಾರದಿಂದ ನೆರವು ಸಿಗುವುದಿಲ್ಲ. ನ್ಯಾಯಾಲಯದಲ್ಲಿ ಅದು ಕಾದಾಡಬೇಕಾಗುತ್ತದೆ. ಬ್ಯಾಂಕುಗಳು ಬಲವಂತದಿಂದ ಕಾನೂನು ಪರಿಹಾರವನ್ನು ಹೊಂದಬೇಕಾಗುತ್ತದೆ. ಕಾನೂನು ಪರಿಹಾರ ಬಹಳ ನಿಧಾನವಾಗುವುದರಿಂದ, ಬ್ಯಾಂಕುಗಳ ನ್ಯಾಯಾಲಯದ ಕಾರ್ಯನೀತಿಗೆ ಒಳಪಟ್ಟು ತಮ್ಮ ಕೇಸುಗಳನ್ನು ಬಲವಂತವಾಗಿ ಸಾಬೀತುಮಾಡಬೇಕಾಗುತ್ತದೆ. ಪ್ರಸಕ್ತ ಕಾನೂನು ಪದ್ಧತಿ ಬ್ಯಾಂಕನ್ನು ಇತರ ಯಾವುದೇ ಸಾಮಾನ್ಯ ಸಂಸ್ಥೆಗಳಿಗಿಂತ ಭಿನ್ನವೆಂದು ಪರಿಗಣಿಸುವುದಿಲ್ಲ. ಸಾಲಗಾರರ ಮೇಲೆ ಯಾವುದೇ ಒತ್ತಡ ಹೇರದ ಬಾಕಿಯ ವಸೂಲಾತಿಯನ್ನು ದೀರ್ಘ ಕಾರ್ಯಪ್ರಕ್ರಿಯೆಯನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ನ್ಯಾಯಾಲಯದಲ್ಲಿ ಕಾನೂನಿನ ಕಾದಾಟಕ್ಕೆ ಇಳಿಯದೆ ಯಥಾಕ್ರಮದಲ್ಲಿ ಡಿಕ್ರಿಯನ್ನು ಪಡೆದ ನಂತರವೂ ಮರುಪಾವತಿಯಾಗುವ ಖಾತರಿ ಇರುವುದಿಲ್ಲ. ಇದಕ್ಕಾಗಿ ವ್ಯಯಿಸಬೇಕಾಗುವ ಶ್ರಮ ಹಾಗೂ ಸಮಯದ ದೃಷ್ಟಿಯಿಂದ ಬ್ಯಾಂಕುಗಳಿಗೆ ಕಾನೂನಿನ ಪರಿಹಾರ ದೊರಕಿಸಿಕೊಳ್ಳುವ ಉತ್ಸಾಹ ಉಂಟಾಗುವುದಿಲ್ಲ. ಈ ಎಲ್ಲ ಮಾಮೂಲಿ ವಿಧಾನಗಳು ವಿಫಲವಾದಾಗ ಮತ್ತು ಸಾಲಗಾರ ನ್ಯಾಯಾಲಯದೊಂದಿಗೆ ಸಹಕರಿಸದಿದ್ದಾಗ ಬ್ಯಾಂಕುಗಳಿಗೆ ಅನ್ಯಥಾ ಮಾರ್ಗವಿಲ್ಲದೆ ನ್ಯಾಯಾಲಯ ಮತ್ತು ವಕೀಲರ ಮೇಲೆ ಮತ್ತಷ್ಟು ಹಣವನ್ನು ಖರ್ಚುಮಾಡಬೇಕಾಗುತ್ತದೆ. ಇದಕ್ಕೆ ಅನುಗುಣವಾದ ಫಲ ದೊರಕುವುದಿಲ್ಲವೆಂಬುದು ಗೊತ್ತಿರುತ್ತದೆ.

ದೇಶದ ಸಾಮಾಜಿಕ ಆರ್ಥಿಕ ಸಮಸ್ಯೆಗಳ ಪರಿಹಾರದ ಹೆಚ್ಚಿನ ಜವಾಬ್ದಾರಿಗೆ ವಾಣಿಜ್ಯ ಬ್ಯಾಂಕುಗಳು ತಮ್ಮ ಹೆಗಲು ಕೊಡುವುದು, ಮತ್ತು ಜನತೆ ಸ್ವಾವಲಂಬಿಯಾಗುವಂತೆ ನೆರವಾಗುವುದು ಈಗ ಆವಶ್ಯಕವಾಗಿದೆ. ದೇಶದ ಉನ್ನತಿ ಮತ್ತು ದಾರಿದ್ರ್ಯ ನಿರ್ಮೂಲನೆ ಅಂತಿಮ ಗುರಿಯಾಗುವಂತೆ ನೋಡಿಕೊಳ್ಳಬೇಕು. ಸಾಲಗಳು ಸರಿಯಾಗಿ ಉಪಯೋಗಕ್ಕೆ ಬಂದರೆ ಮತ್ತು ಯುಕ್ತ ಕಾಲದಲ್ಲಿ ಮರುಪಾವತಿಯಾದಲ್ಲಿ ಮಾತ್ರ ವಾಣಿಜ್ಯ ಬ್ಯಾಂಕುಗಳ ಪಾತ್ರವನ್ನು ನಿರೀಕ್ಷಿಸಬಹುದಾಗಿದೆ. ಬ್ಯಾಂಕುಗಳು ಸಾರ್ವಜನಿಕ ಹಣವನ್ನು ಉಪಯೋಗಿಸುತ್ತಿವೆ ಎಂಬುದನ್ನು, ಆ ಹಣಕ್ಕೆ ಅವು ಹೊಣೆ ಎಂಬುದನ್ನು ಮರೆಯುವಂತಿಲ್ಲ. ಸಾಲಗಳ ಶೀಘ್ರ ವಸೂಲಾತಿಯಲ್ಲಿ ವಾಣಿಜ್ಯ ಬ್ಯಾಂಕುಗಳ ನೆರವಿಗೆ ಸರ್ಕಾರ ಬಾರದಿದ್ದಲ್ಲಿ ಬ್ಯಾಂಕುಗಳು ಹಣದ ಅಭಾವ ಮತ್ತು ಕ್ಲಿಷ್ಟ ಸಾಲಗಳ ವಸೂಲಾತಿಯ ತೊಡಕಿನಲ್ಲಿ ಸಿಲುಕಿಕೊಳ್ಳುವ ದಿನಗಳು ದೂರವಿಲ್ಲ. ಬಡವರಿಗೆ ಹಾಗೂ ಅಗತ್ಯವಿದ್ದವರಿಗೆ ನೆರವು ನೀಡುವುದರಲ್ಲಿ ಬ್ಯಾಂಕುಗಳು ತಮ್ಮ ಪಾತ್ರವನ್ನು ದಕ್ಷತೆಯಿಂದ ನಿರ್ವಹಿಸಬೇಕಾದರೆ ಸಾಲದ ವಸೂಲಾತಿ ಶೀಘ್ರವಾಗಿ, ಸುಲಭವಾಗಿ ಮತ್ತು ಕಡಿಮೆ ಶ್ರಮದಿಂದ ಸಾಧ್ಯವಾಗಬೇಕೆಂಬುದು ಅತ್ಯಂತ ಆವಶ್ಯಕ.



# ಪಾರಿಭಾಷಿಕ ಶಬ್ದಕೋಶ

**ಸಾ. ರಾಜಗೋಪಾಲ**
**ಜಿ. ಎನ್. ನರಸಿಂಹಮೂರ್ತಿ**

**Assignee**: ವಹಿಸಿಕೊಂಡವ, ವರ್ಗಪಡೆದಾತ, ನಿಯೋಗಿ, ನಿಯೋಜಿತ ವೈಯಕ್ತಿಕ ಆಸ್ತಿಯನ್ನಾಗಲಿ, ಯಾವುದೇ ಹಕ್ಕನ್ನಾಗಲಿ ಯಾರಿಗೆ ವಹಿಸಲಾಗಿದೆಯೊ, ವರ್ಗ ಮಾಡಲಾಗಿದೆಯೊ, ನಿಯೋಜಿಸಲಾಗಿದೆಯೊ ಆ ವ್ಯಕ್ತಿ.

**Assignment**: ನಿಯೋಜನ. ಬೇರೊಬ್ಬರಿಗೆ ಆಸ್ತಿ ಅಥವಾ ಹಕ್ಕನ್ನು ಕಾನೂನು ರೀತ್ಯ ವಹಿಸಿಕೊಡುವುದು.

**Assignment for benefit of creditors**: ಸಾಲಿಗರ (ಧನಿಗಳ) ಹಿತಲಾಭಕ್ಕಾಗಿ ನಿಯೋಜನೆ. ಒಬ್ಬ ತನ್ನ ಋಣವನ್ನು ತೀರಿಸಲು ಅಸಮರ್ಥನಾದಾಗ, ತನ್ನ ಸಾಲಿಗರ (ಧನಿಗಳ) ಸಮ್ಮುಖದಲ್ಲಿ ತನ್ನ ಎಲ್ಲ ಆಸ್ತಿಗಳನ್ನೂ ನ್ಯಾಸವೊಂದಕ್ಕೆ ವಹಿಸಿಕೊಟ್ಟು (ನಿಯೋಜಿಸಿ), ಆ ಆಸ್ತಿಗಳ ವಿಕ್ರಯದಿಂದ ಋಣಗಳ ಇತ್ಯರ್ಥವಾಗಿ ಪೂರ್ಣ ಋಣವಿಮುಕ್ತನಾಗುವಂತೆ ಸಲ್ಲಿಸುವುದು. ಈ ರೀತಿಯ ನಿಯೋಜನೆ 7 ದಿನಗಳೊಳಗಾಗಿ ನೋಂದಣಿಯಾಗಬೇಕು. ಇಲ್ಲದಿದ್ದರೆ ಅದು ಅಮಾನ್ಯವಾಗುತ್ತದೆ (ಇನ್‌ವ್ಯಾಲಿಡ್). ನೋಡಿ: **Arrangement with creditors**

**Assignor**: ವಹಿಸಿಕೊಡುವವ, ನಿಯೋಜಕ. ವೈಯಕ್ತಿಕ ಆಸ್ತಿಯನ್ನಾಗಲಿ, ಹಕ್ಕನ್ನಾಗಲಿ ವಹಿಸಿಕೊಡುವವನು, ನಿಯೋಜಿಸುವವನು.

**Assumed Name**: ಕಲ್ಪಿತ ನಾಮ. ವ್ಯವಹಾರದಲ್ಲಿ ವ್ಯಕ್ತಿ ತನ್ನ ಹೆಸರಿನಲ್ಲಿ ಸಹಿ ಮಾಡದೆ ಕಲ್ಪಿತನಾಮದಲ್ಲಿ ಸಹಿ ಮಾಡಿದರೆ ಬ್ಯಾಂಕು ಅಂಥ ಚೆಕ್ಕು ಮತ್ತು ಹುಂಡಿಗಳನ್ನು ಅಂಗೀಕರಿಸುವ ಮುನ್ನ ಕಲ್ಪಿತನಾಮದ ಸಹಿಯನ್ನು ಮಾನ್ಯ ಮಾಡುವ ಬಗ್ಗೆ ಒಂದು ಲಿಖಿತ ಆದೇಶವನ್ನು ಆ ವ್ಯಕ್ತಿಯಿಂದ ಪಡೆದಿರಬೇಕು. ಈ ಆದೇಶವನ್ನು ವ್ಯಕ್ತಿ ತನ್ನ ವೈಯಕ್ತಿಕ ಹೆಸರಿನಲ್ಲಿ ನೀಡಿ ಅದರಲ್ಲಿ ಕಲ್ಪಿತನಾಮದ ಮಾದರಿ ಸಹಿಯನ್ನು ಕೊಟ್ಟಿರಬೇಕು. ಕಲ್ಪಿತನಾಮದಲ್ಲಿ ಸಹಿ ಮಾಡಿದರೂ ವ್ಯಕ್ತಿ ಕಾನೂನು ರೀತ್ಯ ವೈಯಕ್ತಿಕವಾಗಿ ಹೊಣೆಗಾರನಾಗಿರುತ್ತಾನೆ.

**Assurance**: ಜೀವವಿಮೆ. ವಿಮೆ. ಮೂಲದಲ್ಲಿ ಜೀವವಿಮೆಯ ಬಗ್ಗೆ ಬಳಸಲಾಗುತ್ತಿದ್ದ ಈ ಪದ ಈಗ ಅರ್ಥವಿಕಾಸ ಹೊಂದಿ ಎಲ್ಲ ಬಗೆಯ ವಿಮೆಗಳಿಗೂ ಬಳಸಲ್ಪಡುತ್ತದೆ. ಆದರೆ 'ಜೀವ ವಿಮೆ' ಎಂಬುದು ಸರಿ. ಏಕೆಂದರೆ ಜೀವ ವಿಮೆ ನಷ್ಟಪೂರಣವಲ್ಲ, ಭವಿಷ್ಯಕ್ಕೊಂದು ಭರವಸೆ (assurance). ವಿಮಾ ಕರಾರಿನಲ್ಲಿ ನಮೂದಿಸಲಾಗಿರುವ ಘಟನೆ ನಡೆದೇ ತೀರುತ್ತದೆ. ಇತರ ಬಗೆಯ ವಿಮೆಗಳಲ್ಲಿ (ಉದಾಹರಣೆ: ಅಗ್ನಿ) ಘಟನೆ ಸಂಭವಿಸಬಹುದು, ಸಂಭವಿಸದೆಯೂ ಇರಬಹುದು. ಘಟನೆ ಸಂಭವಿಸಿ ನಷ್ಟವಾದರೆ ಮಾತ್ರ ಅದರ ಪೂರಣದ ಪ್ರಶ್ನೆ ಉದ್ಭವಿಸುತ್ತದೆ.

**Attachment**: ಜಫ್ತಿ. ಮೂರನೆಯ ಕಕ್ಷಿಗಳ ವಶದಲ್ಲಿರುವ ನಿರ್ದಿಷ್ಟ ಹಣ ಅಥವಾ ಸರಕನ್ನು ಋಣದ ಇತ್ಯರ್ಥವಾಗುವ ವರೆಗೂ ಋಣಿ ವಿಲೆವಾರಿಮಾಡದಂತೆ ತಡೆದ ನ್ಯಾಯಾಲಯದ ಆಜ್ಞೆ. ಈ ಆಜ್ಞೆಯನ್ನು ಋಣಿಯ ಖಾತೆಗೆ ಸಂಬಂಧಿಸಿದಂತೆ ಬ್ಯಾಂಕಿನ ಮೇಲೆ ಚಲಾಯಿಸಬಹುದು. ಈ ಖಾತೆಯ ಹಣದ ಮೇಲೆ ಧನಿಗೆ ( ಸಾಲಿಗ) ಹಕ್ಕು ಪ್ರಾಪ್ತವಾಗುತ್ತದೆ.

**Attestation**: ದೃಢೀಕರಣ, ಅಭಿಪ್ರಮಾಣನ. ಸಹಿಗೆ ಸಾಕ್ಷಿಯಾಗುವುದು. ಕಾರಣಾಂತರಗಳಿಂದ ಸಹಿ ಮಾಡಲಾಗದೆ ಅದನ್ನು ಯಾವುದಾದರೂ ಚಿಹ್ನೆಯನ್ನು ಬಳಸಿ ಮಾಡಿದಲ್ಲಿ ಅಂಥ ಸಹಿಯನ್ನು ದೃಢೀಕರಿಸುವುದು.

**Attested Copy**: ದೃಢೀಕೃತ ಪ್ರತಿ, ಅಭಿಪ್ರಮಾಣಿತ ಪ್ರತಿ. ಮೂಲ ಪ್ರತಿಯ ತದ್ವತ್ ನಕಲೆಂದು ಒಬ್ಬ ಸಾಕ್ಷಿಯಿಂದ ದೃಢೀಕೃತವಾದ (ಅಭಿಪ್ರಮಾಣಿತವಾದ) ಪ್ರತಿ.

**At par:** ಮುಖ ಬೆಲೆಗೆ, ಸಮ ಬೆಲೆಗೆ.

**At sight:** ನೋಡಿದ ಕೂಡಲೆ. ಹುಂಡಿಯನ್ನು ಹಾಜರುಪಡಿಸಿದ ತತ್‌ಕ್ಷಣ ಹಣ ಪಾವತಿ ಮಾಡುವಂತೆ ಸೂಚಿಸಲು ಹುಂಡಿಯಲ್ಲಿ ಉಪಯೋಗಿಸುವ ಪದ.

**Audit:** ಲೆಕ್ಕ ಪರೀಕ್ಷಣ . ಲೆಕ್ಕ ಪರೀಕ್ಷಕರಿಂದ ಪುಸ್ತಕಗಳ ಮತ್ತು / ಅಥವಾ ಲೆಕ್ಕಗಳ ಪರೀಕ್ಷಣೆ ಮಾಡುವುದು. ಒಂದು ಸಂಸ್ಥೆಯ ನಮೂದಿಸಲಾದ ಲೆಕ್ಕ ಪುಸ್ತಕಗಳನ್ನು ಸರಿಯಾಗಿ ಇಡಲಾಗಿದೆಯೆ, ಒಂದು ನಿಶ್ಚಿತ ದಿನದಂದು ಲೆಕ್ಕಗಳು ಸಂಸ್ಥೆಯ ನಿಜವಾದ ಹಾಗೂ ನ್ಯಾಯವಾದ ವ್ಯವಹಾರ ಸ್ಥಿತಿಯನ್ನು ತೋರಿಸುತ್ತದೆಯೆ ಎಂಬ ಉದ್ದೇಶದಿಂದ ಲೆಕ್ಕ ಪರೀಕ್ಷಣ ಮಾಡಿಸ ಲಾಗುತ್ತದೆ. ಇದನ್ನು ಮಾಡಿದ ಲೆಕ್ಕ ಪರೀಕ್ಷಕರು ಈ ಕುರಿತು ಒಂದು ವರದಿ ಸಲ್ಲಿಸುತ್ತಾರೆ.

**Auditor:** ಲೆಕ್ಕ ಪರೀಕ್ಷಕ. ನೋಡಿ: Audit

**Authorised Capital:** ಅಧಿಕೃತ ಬಂಡವಾಳ. ಕಂಪನಿಯ, ಸಂಘದ, ಜ್ಞಾಪನಪತ್ರದಲ್ಲಿ (ಮೆಮೊರಾಂಡಮ್ ಆಫ್ ಅಸೋಸಿಯೇಷನ್) ನಮೂದಿಸಲಾದ ಬಂಡವಾಳದ ಮೊಬಲಗು. ಭವಿಷ್ಯದ ಆವಶ್ಯಕತೆಗಳನ್ನು ನಿರೀಕ್ಷಿಸಿ ಪೂರ್ವ ಭಾವಿಯಾಗಿಯೇ ಕಂಪನಿ ಗೊತ್ತುಪಡಿಸಿಕೊಂಡ, ರಿಜಿಸ್ಟ್ರಾರರಿಂದ ಅನುಮೋದಿತವಾದ, ಸಂಗ್ರಹಿಸಬಹುದಾದ ಗರಿಷ್ಠ ಬಂಡವಾಳ ಮಿತಿ. ಈ ಮಿತಿಗಿಂತ ಅಧಿಕವಾದ ಬಂಡವಾಳವನ್ನು ಸಂಗ್ರಹಿಸಲು ಷೇರುಗಳನ್ನು ನೀಡುವಂತಿಲ್ಲ. ಹಾಗೆ ಮಾಡಬೇಕಾದರೆ ಕಂಪನಿಗಳ ಅಧಿನಿಯಮದ ವಿಧಿಯನ್ನು ಅನುಸರಿಸಬೇಕು.

**Authorisation:** ಅಧಿಕಾರ ನೀಡಿಕೆ, ಪ್ರಾಧಿಕರಣ.

**Authorised Dealer:** ಅಧಿಕೃತ ವ್ಯಾಪಾರಿ. ವಿದೇಶಿ ವಿನಿಮಯವನ್ನು ಮಾರಲು ಹಾಗೂ ಕೊಳ್ಳಲು ಭಾರತೀಯ ರಿಸರ್ವ್ ಬ್ಯಾಂಕಿನಿಂದ ಪರವಾನಗಿ ಪಡೆದ ಬ್ಯಾಂಕ್ ಅಥವಾ ಇತರ ಸಂಸ್ಥೆ.

**Authorised Money Changer:** ಅಧಿಕೃತ ಹಣಪರಿವರ್ತಕ. ವಿದೇಶಿ ಹಣ ಅಥವಾ ವಿದೇಶಿ ಪ್ರವಾಸಿ ಚೆಕ್ಕುಗಳನ್ನು ಭಾರತೀಯ ರೂಪಾಯಿಗಳಿಗೆ ಪರಿವರ್ತಿಸಲು ಭಾರತೀಯ ರಿಸರ್ವ್ ಬ್ಯಾಂಕಿನಿಂದ ಅನುಮತಿ ಪಡೆದವ.

**Authorised Dealer in Gold:** ಚಿನ್ನದ ಅಧಿಕೃತ ವ್ಯಾಪಾರಿ. ರಿಸರ್ವ್ ಬ್ಯಾಂಕಿನಿಂದ ಅನುಮತಿ ಪಡೆದು ಅದರ ಪರವಾಗಿ ಚಿನ್ನದ ಗಟ್ಟಿಗಳನ್ನು ಮಾರುವ ಸಂಸ್ಥೆ.

**Authorities:** 1 ಆದೇಶಗಳು, ನಿರ್ದೇಶನಗಳು. ಗ್ರಾಹಕರು ಬ್ಯಾಂಕಿಗೆ ಬರಹದಲ್ಲಿ ನೀಡುವ ಅನೇಕ ಆದೇಶಗಳು. 2 ಪ್ರಾಧಿಕಾರಿಗಳು.

**Automation:** ಸ್ವಯಂಚಲೀ ವ್ಯವಸ್ಥೆ. ಸ್ವಯಂಚಲೀ ಯಂತ್ರಗಳ ಬಳಕೆ, ಸ್ವಯಂ ಚಾಲನ ಗ್ರಾಹಕರಿಗೆ ಶೀಘ್ರ ಸೇವೆ ಸಲ್ಲಿಸಲು ಭಾರತದ ಬ್ಯಾಂಕುಗಳಲ್ಲಿ ಸ್ವಯಂಚಲೀ ಯಂತ್ರಗಳನ್ನು ಬಳಸಲಾಗುತ್ತಿದೆ.

**Aval:** ಅವಲ್. ಫ್ರೆಂಚ್ ಭಾಷೆಯ ಪದ. ವಿದೇಶಿ ಹುಂಡಿಯ ಹಿಂಬರಹಕ್ಕೆ ಜಾಮೀನಾಗಿ ನಿಲ್ಲುವವ.

**Average:** 1 ಸರಾಸರಿ. 2 ಕ್ಷತಿ, ವಿಮೆಗೆ ಒಳಪಟ್ಟ ವಸ್ತು ನಷ್ಟ.

**Average Balance:** ಸರಾಸರಿ ಶಿಲ್ಕು.

**Average Clause:** ಸರಾಸರಿ ನಿಬಂಧನೆ. ವಿಮೆ ಮಾಡಿದ ಸ್ವತ್ತಿಗೆ ನಷ್ಟ ಸಂಭವಿಸಿದಾಗ, ಆ ಸ್ವತ್ತಿನ ಪೂರ್ಣ ಮೌಲ್ಯಕ್ಕೆ ವಿಮೆ ಮಾಡಿರದಿದ್ದ ಪಕ್ಷದಲ್ಲಿ, ಪೂರ್ಣ ಮೌಲ್ಯದ ಯಾವ ಪ್ರಮಾಣಕ್ಕೆ ವಿಮೆ ಮಾಡಲಾಗಿದೆಯೋ, ನಷ್ಟದ ಆ ಪ್ರಮಾಣವನ್ನೇ ಪಾವತಿ ಮಾಡಲು ವಿಮಾ ಸಂಸ್ಥೆ ಬದ್ಧವಾಗಿರುವುದೆಂದು ವಿಮಾ ಪಾಲಿಸಿಯಲ್ಲಿ ನಮೂದಿಸಿರುವ ನಿಬಂಧನೆ. ಉದಾಹರಣೆಗೆ ರೂ. 10,000 ಮೌಲ್ಯದ ಒಂದು ಸ್ವತ್ತನ್ನು ರೂ. 5,000ಕ್ಕೆ ವಿಮೆ ಮಾಡಲಾಗಿದೆ. ಬೆಂಕಿಯಿಂದ ಸ್ವತ್ತಿಗೆ ರೂ. 5,000 ನಷ್ಟವಾಗಿದ್ದರೆ ಆಗ ವಿಮೆಯ ಮೊಬಲಗಿನ ಅರ್ಧದಷ್ಟನ್ನು, ಎಂದರೆ ರೂ. 2,500ನ್ನು, ಪಾವತಿಮಾಡಲಾಗುತ್ತದೆ.

**AsDB:** Asian Development Bank: ಏಷ್ಯ ಅಭಿವೃದ್ಧಿ ಬ್ಯಾಂಕ್.

ವಿಶ್ವಸಂಸ್ಥೆಯ ಏಷ್ಯ ಮತ್ತು ಮಧ್ಯ ಪ್ರಾಚ್ಯದ ಆರ್ಥಿಕ ಆಯೋಗದ ಶಿಫಾರಸಿನಂತೆ 1966ರಲ್ಲಿ ಸ್ಥಾಪಿತವಾದ ಬ್ಯಾಂಕು. ಇದರ ಸ್ಥಾಪಕ ಸದಸ್ಯ ರಾಷ್ಟ್ರಗಳ ಸಂಖ್ಯೆ 32. ಇದರಲ್ಲಿ ಅಮೆರಿಕ, ಬ್ರಿಟನ್ ಮತ್ತು ಸ್ವಿಟ್ಜರ್ಲೆಂಡ್‌ಗಳೂ ಸೇರಿವೆ. ಏಷ್ಯದಲ್ಲಿರುವ ಅಭಿವೃದ್ಧಿಶೀಲ ದೇಶಗಳಿಗೆ ಧನಸಹಾಯ ಮಾಡುವುದು ಇದರ ಮುಖ್ಯ ಉದ್ದೇಶ. ಇದರ ಮುಖ್ಯ ಕಛೇರಿ ಮನಿಲಾದಲ್ಲಿದೆ.

**Award:** ಐತೀರ್ಪು. ವಿವಾದಿಗಳು ಮಧ್ಯಸ್ಥಗಾರನಿಗೆ ಒಪ್ಪಿಸಿದ ಯಾವುದೇ ವಿವಾದದ ಬಗ್ಗೆ ಅವನು ನೀಡುವ ನಿರ್ಣಯ.

**A.A.R.: Against All Risks:** ಎಲ್ಲ ನಷ್ಟ ಸಂಭವಗಳ ವಿರುದ್ಧ (ರಕ್ಷಣೆ). ಸಾಗರ ವಿಮೆಯಲ್ಲಿ ನೀಡುವ ವ್ಯಾಪಕ ವಿಮೆ.

**A/c: Account:** ಖಾತೆ.

**Ack: Acknowledgement:** ಸ್ವೀಕೃತಿ.

**A/d: After date:** ದಿನಾಂಕದ ಅನಂತರ. ಸಾವಧಿ ಹುಂಡಿಯ ಪಾವತಿಯ ಗಡುವನ್ನು ಸೂಚಿಸಲು ಈ ಸಂಕ್ಷಿಪ್ತ ರೂಪವನ್ನು ಬಳಸುತ್ತಾರೆ. ಉದಾ: ಈ ಹುಂಡಿಯ ದಿನಾಂಕದಿಂದ ಮೂರು ತಿಂಗಳ ಅನಂತರ.

**ADB:** 1) **Agricultural Development Branch:** ಕೃಷಿ ಅಭಿವೃದ್ಧಿ ಶಾಖೆ.

2) **African Development Bank:** ಆಫ್ರಿಕ ಅಭಿವೃದ್ಧಿ ಬ್ಯಾಂಕ್

**Adv: Advance:** ಮುಂಗಡ.

**ACU: Asian Clearing Union:** ಏಷಿಯನ್ ತೀರುವೆ ಒಕ್ಕೂಟ.

**AID: Aid for International Development:** ಅಂತರರಾಷ್ಟ್ರೀಯ ಅಭಿವೃದ್ಧಿ ನೆರವು ಅಭಿಕರಣ. 1961ರಲ್ಲಿ ಸ್ಥಾಪಿತವಾದ ಅಮೆರಿಕದ ವಿದೇಶಿ ನೆರವಿನ ಕೇಂದ್ರ ಸಂಸ್ಥೆ.



## ನಗರೀಯ ಸಹಕಾರಿ ಬ್ಯಾಂಕುಗಳು

ರಿಸರ್ವ್ ಬ್ಯಾಂಕು, ಯೋಜನೆಯನ್ನು ನೋಂದಾಯಿಸಲು ಅನುಮತಿ ನೀಡುವವರೆಗೆ, ಹೊಸ ನಗರೀಯ ಸಹಕಾರಿ ಬ್ಯಾಂಕುಗಳ ಪ್ರವರ್ತಕರು ಯಾವುದೇ ಸಂದರ್ಭದಲ್ಲಿ ಸದಸ್ಯರನ್ನು ನೋಂದಾಯಿಸಿಕೊಳ್ಳಬಾರದು ಅಥವಾ ಅವರಿಂದ ಷೇರು ಬಂಡವಾಳವನ್ನು ಪಡೆಯಬಾರದು. ಅವರು ಯೋಜನೆಯೊಂದಿಗೆ ಪೂರ್ವಭಾವಿ ಸರ್ವೇಕ್ಷಣ ವರದಿಯನ್ನೂ, ಅದರಲ್ಲಿ ಭಾವೀ ಸದಸ್ಯರ ಕಸುಬುವಾರು ವರ್ಗೀಕರಣವನ್ನೂ ಆ ಪ್ರದೇಶದಲ್ಲಿ ಹೊಸದಾಗಿ ಬ್ಯಾಂಕು ಸ್ಥಾಪಿಸಲು ಇರುವ ಆವಶ್ಯಕತೆ ಮತ್ತು ಸಮುದಾಯದಲ್ಲಿ ಶ್ರೀಸಾಮಾನ್ಯ ಮತ್ತು ದುರ್ಬಲ ವರ್ಗಗಳ ಆವಶ್ಯಕತೆಗಳು ಎಷ್ಟರಮಟ್ಟಿಗೆ ಪೂರೈಸುತ್ತವೆ ಎಂಬುದನ್ನೂ ರಿಸರ್ವ್ ಬ್ಯಾಂಕ್ ನಿರ್ಧರಿಸಲು ಇದರಿಂದ ಸಾಧ್ಯವಾಗುತ್ತದೆ.

